# ಇಂಡಿ ತಾಲೂಕಿನ ಹಾಲುಮತ ದೈವಗಳು: ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯ, ಹಂಪಿ, ಹಸ್ತಪ್ರತಿ ಶಾಸ್ತ್ರ ವಿಭಾಗಕ್ಕೆ
ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ



ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೯-೨೦೧೦

# ಇಂಡಿ ತಾಲೂಕಿನ ಹಾಲುಮತ ದೈವಗಳು: ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯ, ಹಂಪಿ, ಹಸ್ತಪ್ರತಿ ಶಾಸ್ತ್ರ ವಿಭಾಗಕ್ಕೆ
ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ

ಸಂಶೋಧಕರು - ರಾಜಶೇಖರ ಎಸ್ ಮಾರನೂರ
ಮಾರ್ಗದರ್ಶಕರು - ಎಫ್. ಟಿ. ಹಳ್ಳಿಕೇರಿ



ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೯-೨೦೧೦





## ಪರಿವಿಡಿ

## ಇಂಡಿ ತಾಲೂಕಿನ ಹಾಲುಮತ ದೈವಗಳು: ಒಂದು ಅಧ್ಯಯನ

* * *

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ಮಹತ್ವ

೧.೪. ಅಧ್ಯಯನದ ಸ್ವರೂಪ

# ಅಧ್ಯಾಯ ಒಂದು

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

### ಪೀಠಿಕೆ

ಕರ್ನಾಟಕ ಸಂಸ್ಕೃತಿಯಲ್ಲಿ ಹಾಲುಮತ ಸಮುದಾಯದ ಚರಿತ್ರೆಯನ್ನು ಗುರುತಿಸುವ ಕೆಲಸ ಇತ್ತೀಚೆಗೆ ಬಹು ತೀವ್ರತೆಯಿಂದ ನಡೆಯುತ್ತಿದೆ. ಈ ಹಿನ್ನೆಲೆಯಲ್ಲಿ ಹಾಲುಮತ ಅಧ್ಯಯನದ ಆಕರಗಳು, ಹಾಲುಮತ ಗುರು ಒಡೆಯರು. ಹಾಲುಮತ ಒಳಪಂಗಡಗಳು ಅಲ್ಲದೇ ಹಾಲುಮತ ಗೀತ ಸಾಹಿತ್ಯ, ಕಾವ್ಯ ಸಾಹಿತ್ಯ, ಇತ್ಯಾದಿ ನೆಲೆಗಳಿಂದ ಹಾಲುಮತ ಸಮೂಹದ ಇತಿಹಾಸ ಪ್ರಾಚೀನತೆ ಮತ್ತು ಸಾಧನೆಗಳನ್ನು ಕುರಿತು ಕೆಲವು ಅಧ್ಯಯನಗಳು ನಡೆದಿವೆ. ಹಾಲುಮತ ಸಮೂಹವು ವಿಶಿಷ್ಟ ಆಚರಣೆ, ನಂಬಿಕೆ, ಸಂಪ್ರದಾಯಗಳಿಂದ ಪ್ರಾಚೀನ ಕನ್ನಡಿಗರ ಸಾಮೂಹಿಕ ಪ್ರಜ್ಞೆಗೆ ಪ್ರತಿನಿಧಿ ಎನ್ನುವಂತೆ ಬೆಳೆದುಬಂದಿದೆ. ಮೂಲತಃ ಪಶುಪಾಲನೆಯ ಸಂಸ್ಕೃತಿಯಿಂದ ತಮ್ಮ ಬದುಕನ್ನು ರೂಪಿಸಿಕೊಂಡ ಹಾಲುಮತಸ್ಥರು ಪ್ರಾಚೀನ ಭಾರತದ ಆದಿವಾಸಿಗಳಂತೆ ಅತ್ಯಂತ ಪ್ರಾಚೀನ ಇತಿಹಾಸವನ್ನು ಉಳ್ಳವರಾಗಿದ್ದಾರೆ. ಇವರನ್ನು ಕುರಿತು ಕನ್ನಡದಲ್ಲಿ ಡಾ.ಶಂ.ಭಾ.ಜೋಶಿಯವರಂತಹ ವಿದ್ವಾಂಸರು ''ಹಾಲುಮತ ದರ್ಶನ'' ಎಂಬ ಗ್ರಂಥವನ್ನು ರಚನೆ ಮಾಡಿದ್ದಾರೆ. ಅದೇ ರೀತಿ ಇವರ ಸಾಹಿತ್ಯ ಇವರ ಪ್ರಾದೇಶಿಕ ವೈಶಿಷ್ಟ್ಯ ಈ ಸಮುದಾಯದ ದೈವಗಳ ಕುರಿತು ಕನ್ನಡದಲ್ಲಿ ಕಾವ್ಯ ಪುರಾಣಗಳು ರಚನೆಯಾಗಿವೆ. ಈ ಎಲ್ಲಾ ಆಕರಗಳನ್ನು ಪರಾಮರ್ಶಿಸಿ ಹಾಲುಮತಸ್ಥರು ಐತಿಹಾಸಿಕ ಹಿನ್ನೆಲೆಯ ಸಂಗತಿಗಳನ್ನು ದಾಖಲಿಸುವ ಪ್ರಯತ್ನ ನಡೆದಿದೆ.

### ೧.೧. ಅಧ್ಯಯನದ ಉದ್ದೇಶ

''ಇಂಡಿ ತಾಲೂಕಿನ ಹಾಲುಮತ ದೈವಗಳು: ಒಂದು ಅಧ್ಯಯನ'' ಎಂಬ ಸಂಪ್ರಬಂಧದಲ್ಲಿ ದೈವಗಳನ್ನು ಗರ್ಭೀಕರಿಸಿಕೊಂಡ ಹಾಲುಮತದವರ ಆಚರಣೆ ನಂಬಿಕೆ ಸಂಪ್ರದಾಯಗಳನ್ನು ಕುರಿತು ಚರ್ಚಿಸಲಾಗಿದೆ. ಪ್ರಾಚೀನ ಇತಿಹಾಸದಲ್ಲಿ ಹಾಲುಮತದವರು ಕುರುಬರೆಂದು ಕರೆಯಿಸಿಕೊಂಡಿದ್ದಾರೆ. ಸಮಾಜದಲ್ಲೂ, ಧರ್ಮದಲ್ಲೂ ಮುಂಚೂಣಿಯಲ್ಲಿರುವ ಹಾಲುಮತ ಸಮುದಾಯದ ಶ್ರೇಷ್ಠತೆಯನ್ನು ಹಾಲುಮತ ಕಾವ್ಯ ಪುರಾಣಗಳು ಅಭಿವ್ಯಕ್ತಪಡಿಸುತ್ತವೆ. ಈ ಹಿನ್ನೆಲೆಯಲ್ಲಿಯೇ ಹಾಲುಮತ ಪುರಾಣಗಳಲ್ಲಿನ ಸಾಂಸ್ಕೃತಿಕ ಅನನ್ಯತೆಯನ್ನು ತಿಳಿದುಕೊಳ್ಳುವುದು ಈ ಸಂಪ್ರಬಂಧದ ಮುಖ್ಯ ಉದ್ದೇಶವಾಗಿದೆ.

೧.೨. ಅಧ್ಯಯನದ ವ್ಯಾಪ್ತಿ

ಈಗಾಗಲೇ ಹಸ್ತಪ್ರತಿ ಮತ್ತು ಮೌಖಿಕ ಪರಂಪರೆಯಿಂದ ಲಿಖಿತರೂಪಕ್ಕೆ ಹಾಲುಮತ ಪುರಾಣಗಳು ಮುದ್ರಣಗೊಂಡಿವೆ. ಹಾಲುಮತ ಸಮಾಜದ ಕುರಿತು ಕಾವ್ಯ ಪುರಾಣಗಳನ್ನು ಈ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಜೊತೆಗೆ ಅಧ್ಯಯನಕ್ಕೆ ಪೂರಕ ಆಕರಗಳಾಗಿ ಕುರುಬ ಸಮುದಾಯ ಕುರಿತು ಬಂದಿರುವ ವಿಮರ್ಶೆ ಕೃತಿಗಳನ್ನು ಅದಕ್ಕೆ ಸಂಬಂಧಿಸಿದಂತೆ ಅನ್ಯ ಸಮುದಾಯಗಳ ಕೃತಿಗಳನ್ನು ಮಾದರಿಯಾಗಿ ಬಳಸಿಕೊಳ್ಳಲಾಗಿದೆ. ಆಚರಣೆ ನಂಬಿಕೆ ಮತ್ತು ಸಾಮಾಜಿಕ ಆಶಯಗಳನ್ನು ಭೌಗೋಳಿಕತೆಗೆ ಅನುಗುಣವಾಗಿ ಈ ಸಮುದಾಯ ನಡೆಯಿಸಿಕೊಂಡು ಬಂದಿದೆ. ಆದ್ದರಿಂದ ಪುರಾಣಗಳಲ್ಲಿ ಸ್ಥಳ ವ್ಯಕ್ತಿನಾಮಗಳ ವೈವಿಧ್ಯತೆಯನ್ನು ಹೊಂದಿದೆ. ಕರ್ನಾಟಕ, ಮಹಾರಾಷ್ಟ್ರ, ಆಂಧ್ರಪ್ರದೇಶ ಗಡಿ ಪ್ರದೇಶಗಳಲ್ಲಿಯೂ ಈ ಸಮುದಾಯವು ನೆಲೆಯೂರಿದೆ. ಅಲ್ಲದೆ ಮಹಾರಾಷ್ಟ್ರದ ಗಡಿ ಭಾಗದಲ್ಲಿ ಪ್ರಬಲ ಸಮುದಾಯವಾಗಿ ಹಾಲುಮತಸ್ಥರು ಕಂಡುಬರುವರು. ಹಾಗಾಗಿ ಈ ಅಧ್ಯಯನಕ್ಕೆ ಕರ್ನಾಟಕದಲ್ಲಿನ ಬಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ಹೋರ್ತಿ, ತಡಲಗಿ, ತಾಂಬಾ, ಬೋಳೆಗಾಂವ, ಇಂಡಿ, ಹಿರೇರೂಗಿ, ಶಿರಾಡೋಣ, ಬಳ್ಳೊಳ್ಳಿ, ಝಳಕಿ, ಸಂಗೋಗಿ, ಗೋಳಸಾರ, ಲಾಳಸಂಗಿ, ಮಹಾರಾಷ್ಟ್ರದ ಹುಲಜಂತಿ, ಇನ್ನೂ ಮುಂತಾದ ಪ್ರದೇಶಗಳಲ್ಲಿ ಕ್ಷೇತ್ರಕಾರ್ಯದಿಂದ ಛಾಯಾಚಿತ್ರಗಳನ್ನು ದಾಖಲಿಸಲಾಗಿದೆ. ಈ ದೈವಗಳ ಪುರಾಣದ ಜೊತೆಗೆ ಕ್ಷೇತ್ರಕಾರ್ಯದ ವ್ಯಾಪ್ತಿಯನ್ನು ಮೀರದೆ ಪ್ರಬಂಧದ ಅಧ್ಯಯನವನ್ನು ಸೀಮಿತ ವ್ಯಾಪ್ತಿಯಲ್ಲಿ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಈ ಮೂಲಕ ಜನಪದ ಅಧ್ಯಯನದ ಮಾದರಿಯಲ್ಲಿ ವಿಶ್ಲೇಷಣೆಯನ್ನು ಮಾಡಲಾಗಿದೆ.

೧.೩. ಅಧ್ಯಯನದ ಮಹತ್ವ

ಇತಿಹಾಸದುದ್ದಕ್ಕೂ ಸಾಂಸ್ಕೃತಿಕ ಮಹತ್ವವನ್ನು ಕಲೆ, ಸಾಹಿತ್ಯ ಮತ್ತು ವಾಸ್ತು ಶಿಲ್ಪದಲ್ಲಿಯೇ ಹೇಳಲಾಗಿದೆ. ಆದರೆ ಸಮುದಾಯಗಳ ಅಧ್ಯಯನಕ್ಕೆ ಬಂದಾಗ ಸಾಂಸ್ಕೃತಿಕ ಮಹತ್ವ ಎನ್ನುವುದು ಆ ಸಮುದಾಯದ ನಿತ್ಯ ಜೀವನದ ಕಲೆಯೇ ಆಗಿರುತ್ತದೆ. ಜನಪದರ ಮೌಖಿಕ ಚರಿತ್ರೆಗೆ ಲಿಖಿತ ಚರಿತ್ರೆಯು ಮುಖ್ಯ. ಆಕರ ಸಾಮಗ್ರಿಗಳನ್ನು ಒದಗಿಸುವ ಮೂಲಕ ಆಯಾ ಸಮುದಾಯಗಳ ತಾತ್ವಿಕ ಜ್ಞಾನ ಸಾಹಿತ್ಯ ಕಲೆ, ಸಾಮಾಜಿಕ ಹಾಗೂ ಧಾರ್ಮಿಕ ಮೂಲಗಳನ್ನು ಬಿತ್ತರಿಸುವ ಕಾರ್ಯ ನಿರ್ವಹಿಸುತ್ತದೆ. ಇವನ್ನು ಪುರಾಣ, ಕಾವ್ಯಗಳು ಸ್ಥಿರ ಸಮುದಾಯಕ್ಕೆ ಗಿಳಿ ಪಾಠದಂತೆ ಚರಿತ್ರೆಯನ್ನು ಒಪ್ಪಿಸುತ್ತವೆ. ಜೊತೆಗೆ ತಾರ್ಕಿಕ ಚಿಂತನೆಗೆ ಪ್ರತಿಯೊಬ್ಬರನ್ನು ತೊಡಗಿಸುತ್ತವೆ. ಇಂತಹ ಕಾವ್ಯ ಪುರಾಣಗಳಿಂದಲೇ ಭಾರತದ ಇತಿಹಾಸ ರಚನೆಗೊಂಡಿರುವುದು ನಿಜ ಸಂಗತಿಯಾಗಿದೆ.

ಚರಿತ್ರೆಯಲ್ಲಿ ಯಾವುದೋ ಕಾರಣಕ್ಕೆ ಸಮುದಾಯದ ಬದುಕಿನಲ್ಲಿ ಸಾಂಸ್ಕೃತಿಕ ಸ್ಥಿತ್ಯಂತರಗಳು ನಡೆದಿರುತ್ತವೆ. ಅದನ್ನು ಹಾಗೆಯೇ ಸಮುದಾಯಗಳು ಉಳಿಸಿಕೊಂಡು ಬರಬಹುದು. ಇಲ್ಲವೇ ಪರಿವರ್ತನೆಗೊಂಡಿರಲೂ ಸಾಧ್ಯವಿದೆ. ಪ್ರಾರಂಭದಲ್ಲಿ ಅಲೆಮಾರಿಯಾಗಿದ್ದ ಹಾಲುಮತ ಸಮುದಾಯವು ಒಂದು ಕಡೆ ನೆಲೆನಿಂತು ಸ್ಥಿರ ಜೀವನವನ್ನು ರೂಪಿಸಿಕೊಂಡ ನಂತರ ನಿರ್ಧಿಷ್ಟ ಜೀವನ ಕ್ರಮವು ರಚಿತವಾಯಿತು. ನಂತರದಲ್ಲಿ ಇತರೆ ಶಿಷ್ಟ ಸಮುದಾಯಗಳು ಈಗಾಗಲೇ ರೂಪಿಸಿಕೊಂಡಿದ್ದಂತಹ ಪುರಾಣಗಳು ಅಂದರೆ ಜೈನ, ವೈದಿಕ, ವೀರಶೈವ ಪುರಾಣಗಳು ಇಡೀ ಸಮಾಜವನ್ನು ನಿರ್ದೇಶನ ಮಾಡಿ ನಿಯಂತ್ರಣ ಮಾಡುತ್ತಿದ್ದವು. ಈ ವಿಷಯವನ್ನು ಅರಿತ ಶೂದ್ರ ಸಂಪ್ರದಾಯಗಳು ಅವುಗಳನ್ನು ಯಥಾರೀತಿಯಲ್ಲಿ ಸ್ವೀಕರಿಸದೇ ತಮ್ಮದೇ ಬದುಕಿನ

ವಿವರವನ್ನೊಳಗೊಂಡ ದೇಶಿ ಪುರಾಣಗಳನ್ನು ಕಟ್ಟಿಕೊಳ್ಳುವುದಕ್ಕೆ ಪ್ರಯತ್ನಿಸಿದವು. ಇದರ ಪ್ರತಿಫಲವಾಗಿ ನೂರಾರು ಜನಪದ ಪುರಾಣಗಳು ರಚನೆಯಾದವು. ಇಂತಹ ಸಂಕ್ರಮಣಾವಸ್ಥೆಯಲ್ಲಿ ಕುರುಬ ಸಮುದಾಯಕ್ಕೆ ಸಂಬಂಧಿಸಿದ ಕೆಲ ಪುರಾಣಗಳು ರಚನೆಗೊಂಡವು. ಹೀಗೆ ರಚನೆಗೊಂಡ ಹಾಲುಮತ ಪುರಾಣಗಳು ಸಮಾಜದ ವಿಣ ಶ್ರೇಣಿಕರಣ ವ್ಯವಸ್ಥೆಯ ಕಪಿಮುಷ್ಟಿಯಿಂದ ಬಿಡಿಸಿಕೊಳ್ಳುವಲ್ಲಿ ಅತೀಮಾನುಷ ವರ್ಣನೆ, ಪವಾಡಗಳನ್ನು ಆಕ್ರಮಿಸುವುದು ಮಹತ್ವದ ಅಂಶವಾಗಿದೆ. ಪ್ರತಿಭಟನೆಯ ರೀತಿಯಲ್ಲಿಯೇ ತನ್ನ ಅಸ್ತಿತ್ವವನ್ನು ಕಾಪಾಡಿಕೊಂಡು ಬಂದಿರುವುದು ವಿಶೇಷವಾಗಿದೆ. ಅಲ್ಲದೇ ಶಿಷ್ಟ ಪುರಾಣಗಳ ಪರಿಸರದಲ್ಲಿ ಜನಪದ ಪುರಾಣಗಳು ತನ್ನ ಸ್ವಂತಿಕೆ ಮತ್ತು ಅನನ್ಯತೆಯನ್ನು ತಿಳಿಸುವುದರಲ್ಲಿ ಈ ಸಮುದಾಯವು ಹೊಂದಿದ್ದ ಶಾಶ್ವತ ನೆಲೆಯ ಮಹತ್ವವನ್ನು ಪ್ರತಿನಿಧಿಸುತ್ತದೆ.

### ೧.೪. ಅಧ್ಯಯನದ ಸ್ವರೂಪ

ಅಧ್ಯಾಯ ಒಂದರಲ್ಲಿ ಅಧ್ಯಯನದ ಪ್ರವೇಶ, ಉದ್ದೇಶ, ವ್ಯಾಪ್ತಿ, ಮಹತ್ವ ಮತ್ತು ಅದರ ಸ್ವರೂಪವನ್ನು ವಿವರಿಸಲಾಗಿದೆ. ಹಾಗೂ ಹಾಲುಮತ ದೈವಗಳಿಗೆ ಸಂಬಂಧಿಸಿದಂತೆ ಈ ಕುರಿತು ಕನ್ನಡದಲ್ಲಿ ಈವರೆಗೆ ನಡೆದಿರುವ ಅಧ್ಯಯನ ಸಮೀಕ್ಷೆಯನ್ನು ವಿವರಿಸಲಾಗಿದೆ.

ಎರಡನೇ ಅಧ್ಯಯದಲ್ಲಿ ದೈವಗಳ ಹುಟ್ಟು ಮತ್ತು ಬೆಳವಣಿಗೆಯ ಬಗ್ಗೆ ವಿವರಿಸಲಾಗಿದೆ. ಅಧ್ಯಾಯ ಮೂರರಲ್ಲಿ ಹಾಲುಮತ ದೈವಗಳು ರಚನೆಯಾಗಲು ಕಾರಣವೇನು? ಈ ಮೂಲಕ ಪೌರಾಣಿಕ, ಸಾಮಾಜಿಕ ಮತ್ತು ಚಾರಿತ್ರಿಕ ಹಿನ್ನೆಲೆಯಲ್ಲಿ ಹಾಲುಮತ ಸಮುದಾಯದ ಪ್ರಾಚೀನತೆಯನ್ನು ಪ್ರಸ್ತುತ ದೈವಗಳು ಚಿತ್ರಿಸಿರುವುದನ್ನು ಸೈದ್ಧಾಂತಿಕವಾಗಿ ನಿರೂಪಿಸಲಾಗಿದೆ.

ನಾಲ್ಕನೇಯ ಅಧ್ಯಾಯದಲ್ಲಿ ಹಾಲುಮತ ದೈವಗಳನ್ನು ಮುಖ್ಯವಾಗಿಟ್ಟುಕೊಂಡು ಪ್ರತಿಯೊಂದು ವ್ಯಕ್ತಿಗಳನ್ನು ವಿವರವಾಗಿ ವಿಶ್ಲೇಷಣೆ ಮಾಡಲಾಗಿದೆ. ಜೊತೆಗೆ ಹದಿನಾಲ್ಕು ಹಾಲುಮತ ದೈವಗಳ ಒಟ್ಟು ಕಥಾ ಸಮೀಕ್ಷೆಯನ್ನು ತಿಳಿಸಲಾಗಿದೆ. ಪುರಾಣಗಳಲ್ಲಿನ ಮುಖ್ಯ ವ್ಯಕ್ತಿಗಳ ಚರಿತ್ರೆ, ಪವಾಡ, ಅವತಾರ ಎಂಬ ಮಾಹಿತಿಯನ್ನು ವಿವರಿಸಲಾಗಿದೆ. ಹಾಗೂ ಪುರಾಣಗಳಲ್ಲಿ ದೈವೀ ಪುರುಷರಿಗೆ ನೆರವಾಗುವ ಪ್ರಾಣಿ ಜಗತ್ತನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ಐದನೇ ಅಧ್ಯಾಯದಲ್ಲಿ ಹಾಲುಮತ ದೈವಗಳ ಸಾಂಸ್ಕೃತಿಕ ಅಧ್ಯಯನದಿಂದ ಮೂಡಿ ಬಂದಿರುವ ಅಧ್ಯಯನದ ಫಲಿತಗಳನ್ನು ದಾಖಲಿಸಲಾಗಿದೆ. ಪ್ರಬಂಧಕ್ಕೆ ಪೂರಕವಾಗಿ ಮತ್ತು ಅಧ್ಯಯನದಲ್ಲಿ ಚರ್ಚಿಸಲಾದ ಮಹತ್ವದ ದಾಖಲೆಗಳನ್ನು ಅನುಬಂಧಗಳಲ್ಲಿ ಸಂಯೋಜಿಸಲಾಗಿದೆ.

ಒಟ್ಟಿನಲ್ಲಿ ಕಲ್ಯಾಣ ರಾಜ್ಯದಲ್ಲಿ ನಡೆದ ಘಟನೆಯಿಂದ ಹಿಡಿದು ಇಂದಿಗೂ ಒಂದು ಜನವರ್ಗದ ಧಾರ್ಮಿಕ ಶಕ್ತಿಗಳಾಗಿ ಆರಾಧನೆಗೊಳ್ಳುತ್ತಿರುವ ಹಾಲುಮತ ವೀರರ ಮತ್ತು ಧಾರ್ಮಿಕ ಪುರುಷರ ಜೊತೆಗೆ ಈ ಸಮುದಾಯದ ಲೌಕಿಕ ಬದುಕನ್ನು ನಿರೂಪಿಸುವಲ್ಲಿ ಹಾಲುಮತ ದೈವಗಳು ತಮ್ಮ ಪಾತ್ರವನ್ನು ವಸ್ತು ನಿಷ್ಠವಾಗಿ ಅಧ್ಯಯನಕ್ಕೆ ಒಳಪಡಿಸುವ ಮಹತ್ವದ ಉದ್ದೇಶದಿಂದ ಸಿದ್ಧಗೊಂಡ ಸಂಪ್ರಬಂಧವೇ ಹಾಲುಮತ ದೈವಗಳು: ಒಂದು ಅಧ್ಯಯನವಾಗಿದೆ.

* * *

## ಅಧ್ಯಾಯ ಎರಡು

## ಹಾಲುಮತ ದೈವಗಳ ಹುಟ್ಟು ಮತ್ತು ಬೆಳವಣಿಗೆ

ಹಾಲು ಪೌಷ್ಠಿಕ ಆಹಾರವಿರುವುದರಿಂದ ಹಿಂದಿನ ಕಾಲದ ಜನರು ಚರಿಗೆ ಗಟ್ಟಲೇ ಹಾಲನ್ನು ಕುಡಿದು ಶಕ್ತಿಯನ್ನು ಸಂಪಾದಿಸುತ್ತಿದ್ದರೆಂಬ ಮಾತುಗಳು ಗರತಿಯ ಹಾಡುಗಳಲ್ಲಿ ಪ್ರಸಿದ್ಧವಾಗಿವೆ. ಕಳ್ಳಿಯ, ಎಕ್ಕೆಯ, ಅತ್ತಿಯಾ ಸುಣ್ಣದ ತಿಳಿನೀರು ಇವೆಲ್ಲವುಗಳು ಬೆಳ್ಳಗಿದ್ದರೂ ಸೇವಿಸುವಂತಹ ಹಾಲು ಇರುವುದಿಲ್ಲ. ಆದುದರಿಂದ ನಾವು ಆರೋಗ್ಯಕ್ಕೆ ಉತ್ತಮವಾದ ಹಾಲು ಯಾವುದಿರುತ್ತದೆಂಬುವುದನ್ನು ಮೊದಲು ತಿಳಿದುಕೊಳ್ಳಬೇಕು.

''ಹಾಲು ಇದ್ದಾಗ ಹಬ್ಬವ ಮಾಡವ್ವ
ನಾವು ನಾಲ್ವರು ಮನಿಯಾಗ ಇದ್ದಾಗ
ಮಾಡವ್ವ ಮಗನ ಮದುವೆಯ''೧

''ಹಾಲುಂಡ ತವರೀಗಿ ಏನೆಂದು ಹಾಡಲೆ
ಹೊಳಿ ದಂಡಿಲಿರುವ ಕರಕೀಯು - ಕುಡಿಯಂಗ
ಹಬ್ಬಲೇ ಅವರ ರಸಬಳ್ಳಿ''೨

ಈ ತ್ರಿಪದಿ ಎಲ್ಲ ಜನಪದ ಬಾಯಲ್ಲಿ ಗುಣುಗುತ್ತಾ ತಮ್ಮ ಕೆಲಸಕಾರ್ಯಗಳನ್ನು ಮಾಡುವಾಗ ಹಾಡುತ್ತಿರುತ್ತಾರೆ. ತಂದೆ-ತಾಯಿಗಳ ಉಪಕಾರ ಸ್ಮರಣೆಯು ಇದರಲ್ಲಿ ಕೆನೆಗಟ್ಟಿದೆ. ಇನ್ನೊಂದು ಪದ್ಯದಲ್ಲಿ ಅಂದಿನ ಗರತಿಯರು ಅಕ್ಕ ತಂಗಿ, ಅಣ್ಣ ತಮ್ಮ, ಅತ್ತಿಗೆ-ನಾದಿನಿಯರೆಲ್ಲರೂ ಹಾಸ್ಯಕ್ಕಾಗಿ ಈ ರೀತಿಯಾಗಿ ಹಾಡಿದ್ದಾರೆ.

''ಅಣ್ಣನ ಹೆಂಡತಿ ಕಣ್ಣಿಗೆ ಒಳ್ಳೆಯವಳು
ಸುಣ್ಣದ ನೀರು ಒಲಿಮುಂದ ಇಟಗೊಂಡು
ಎಮ್ಮಿ ಹಾಲೆಂದು ಬಡಿಸ್ಯಾಳು''೩

ತಂಗಿಯ ಸ್ಥಾನದಲ್ಲಿರುವ ಗರತಿಯು ಅಣ್ಣನ ಹೆಂಡತಿಯ ಗುಣಾವಗುಣಗಳನ್ನು ಬಿಂಬಿಸುವ ಈ ಹಾಡು ಹಾಲಿನ ಬಣ್ಣದಂತಿರುವ (ಪ್ರೀತಿಯಿಲ್ಲದ) ಸುಣ್ಣದ ನೀರು ಹಾಲೆಂದೇ ಉಣಬಡಿಸುವ ಹೀನ ಬುದ್ಧಿಯವರೂ ಇದ್ದರೆಂಬುದನ್ನು ಬಣ್ಣಿಸುತ್ತದೆ. ಹೀಗೆ ಹಾಲಿನ ಬಗೆಗೆ ಪವಿತ್ರ ಭಾವನೆಗಳಿವೆ.

೧. ಶುಭ್ರತ್ವ ೨. ದ್ರವತ್ವ ೩. ಮಧುರತ್ವ.

ಹೀಗೆ ಹಾಲಿನಲ್ಲಿ ಮೂರು ಗುಣಗಳಿವೆ. ಅದರಲ್ಲಿ ಒಂದು ಗುಣವನ್ನು ಕಳೆದುಕೊಂಡರೆ ಹಾಲು ಅಲ್ಲ. ಕಳ್ಳಿಯ ಹಾಲು ಶುಭ್ರವಾಗಿದ್ದರೂ ಅದು ಹಾಲು ಅಲ್ಲ. ಅದರಲ್ಲಿ ಮಧುರತ್ವವಿಲ್ಲ. ಸುಣ್ಣದ ನೀರು ಶುಭ್ರತ್ವ ದ್ರವವಿದ್ದರೂ ಅದು ನಿಜವಾದ ಹಾಲು ಅಲ್ಲ. ಯಾಕೆಂದರೆ ರುಚಿಯಿಲ್ಲದ ಸಕ್ಕರೆಯು ಶುಭ್ರವಾಗಿದ್ದರೂ ಅದರಲ್ಲಿ ದ್ರವತ್ವವೂ ಇರುವುದಿಲ್ಲ. ಹಾಲಿನ ಮಹತ್ವವನ್ನು ಕುರಿತು ಕನ್ನಡದ ಖ್ಯಾತ ಕವಿ ಸರ್ವಜ್ಞನು ''ಹಾಲುಮತ''ವನ್ನು ಕುರಿತು ತನ್ನ ಒಂದು ವಚನದಲ್ಲಿ ಈ ರೀತಿಯಾಗಿ ಹೇಳಿದ್ದಾನೆ.

''ಹಾಲು ಹೈನವ ಲೇಸು | ಕೀಲು ಬಂಡಿಗೆ ಲೇಸು ||
ಶೀಲವುಳ್ಳಂಥ ಸತಿ ಲೇಸು | ಮತಗಳಲ್ಲಿ ||
ಹಾಲುಮತ ಲೇಸು ಸವಜ್ಞ ||

ಇಂದು ಧರ್ಮವು ಮೂಲಭೂತವಾದಿಗಳ ವೇದಿಕೆಯಾಗುತ್ತಿದೆ. ಪ್ರಪಂಚದ ಪ್ರಾಚೀನ ಧರ್ಮಗಳಾದ ಬೌದ್ಧ ಜೈನ, ಕ್ರೈಸ್ತ, ಶಿಖ್, ನಾಥ, ಶೈವ, ವೀರಶೈವ, ಅನೇಕ ನೂರಾರು ಧರ್ಮಗಳು ಈ ಭೂಮಿಯಲ್ಲಿ ಹುಟ್ಟಿ ಬೆಳೆದು ಜೀವಂತವಾಗಿವೆ. ಕೆಲವು ನಾಶವಾಗಿ ಹೋಗಿವೆ. ಮತ್ತೆ ಕೆಲವು ಉದಯದ ಹೊಸ್ತಿಲಲ್ಲಿಯೇ ನಿಂತಿವೆ ಎಂಬುವುದನ್ನು ಹೇಳಬಹುದು.

ನಾವಿಲ್ಲಿ ಪ್ರಸ್ತಾಪಿಸುತ್ತಿರುವುದು ಇಂಥ ಧರ್ಮಗಳನ್ನು ಅಲ್ಲ ಆದರೆ ವೃತ್ತಿ ಪರವಾದ ಧರ್ಮವನ್ನು ಪ್ರಾಣಿ ಜೀವಿಗಳ ಹಿಂಸೆಗೆ ಮಂಗಳವನ್ನು ಹಾಡಿದ ಧರ್ಮ ಮಾನವ ಕ್ರೂರತನದಿಂದ ಸಂಪಾದಿಸಿದಂತಹ ಮಾಂಸಾಹಾರವನ್ನು ತ್ಯಜಿಸುವಂತೆ ಮಾಡಿದ ಮಾನವೀಯ ಧರ್ಮ. ಸಕಲ ಜೀವಿಗಳಿಗೆ ಲೇಸನ್ನೇ ಬಯಸುವ ಮಹಾಧರ್ಮ ಸೃಷ್ಟಿ ಜೀವಿಗಳಿಗಾಗಿ ಕೊಡಮಾಡಿದ ಸನಾತನ ಧರ್ಮ. ಎಂದೆಂದಿಗೂ ಬಾಡದ ಅಳಿಯದ ಅನಂತವಾದ ಧರ್ಮ. ಇಂಥದೊಂದು ಧರ್ಮ ಹಿಂದೆ ಇತ್ತು ಇಂದೂ ಮತ್ತು ಮುಂದೆಯೂ ಇರುತ್ತದೆ. ಅದೇ ಹಾಲುಮತ ಧರ್ಮ. ಹಾಲಿನಂತಹ ಗುಣವನ್ನು ಹೊಂದಿದ ಧರ್ಮವಾಗಿದೆ. ಅಂತೆಯೇ 'ಹಾಲುಮತ' ಎಂಬ ಈ ಹೆಸರು ಪ್ರಾಪ್ತವಾಗಿದೆಯೆಂಬುವುದು ನನ್ನ ಅಭಿಪ್ರಾಯವಾಗಿದೆ. ಉಳಿದ ಧರ್ಮಗಳಿರುವಂತೆ ಹಾಲುಮತ ಸಂಸ್ಥಾಪಕ, ಪ್ರವಾದಿ ಅಥವಾ ಗುರು ಈ ಧರ್ಮಕ್ಕಿಲ್ಲ. ಸೃಷ್ಟಿಯೇ ಇದಕ್ಕೆ ಗುರು. ಪ್ರವಾದಿ ಸಂಸ್ಥಾಪಕ ಜನಪದರು ಅಂದರೆ ಪಶುಪಾಲಕರನ್ನುದ್ದೇಶಿಸಿ ಮಾತನಾಡುವ ಅವರನ್ನು ''ಹಾಲುಮತದವರು'' ಎಂದು ಗೌರವಯುತವಾದ ಪದವನ್ನು ಮರೆಯದೇ ಉಪಯೋಗಿಸುತ್ತಾರೆ. ತಿಳಿದವರು ಮತ್ತು ತಿಳಿಯದೇ ಇರುವವರೂ ಮತ್ತು ಬುದ್ಧಿ ಜೀವಿಗಳೂ ಹಾಲುಮತ ಧರ್ಮದ ಒಳಹೊರಗಿನ ನೈಜತೆಯನ್ನು ಸಂಪೂರ್ಣ ತಿಳಿದವರಾಗಿದ್ದಾರೆ.

ಹಾಲುಮತ ಧರ್ಮದ ತತ್ವಸಿದ್ಧಾಂತಗಳು ಆಚಾರ ವಿಚಾರಗಳು, ನಡೆ, ನುಡಿಗಳ ರೀತಿ ನೀತಿಗಳು, ರೂಢಿ, ಪದ್ಧತಿಗಳು ಮತ್ತು ಅವರು ಹಾಕಿಕೊಟ್ಟ ಹೊಸ ಹೊಸ ಮಾರ್ಗಗಳು ಪ್ರಪಂಚದ ಎಲ್ಲ ಧರ್ಮಗಳಲ್ಲಿ ಇಂದಿಗೂ ರೂಢಿಗತವಾಗಿ ಮತ್ತು ಪರಂಪರೆಯ ರೂಪದಲ್ಲಿ ಉಳಿದುಕೊಂಡು ಬಂದಿವೆ. ಈ ಹಾಲುಮತ ಧರ್ಮಕ್ಕೆ ತನ್ನದೇಯಾದ ಯಾವುದೇ ಲಿಖಿತ ಸಂವಿಧಾನ, ನಿಯಮ, ಇಲ್ಲದಿದ್ದರೂ ಕೂಡಾ ಅದು ಭಾವನಾತ್ಮಕ, ಆಧ್ಯಾತ್ಮಿಕ ಮತ್ತು ಮಾನವೀಯ, ಸಂವಿಧಾನ ಇದಕ್ಕೆ ಇರುವುದನ್ನು ನಾವು ಒಪ್ಪಿಕೊಳ್ಳಬೇಕಾಗುತ್ತದೆ. ಪ್ರಪಂಚದ

ಯಾವುದೇ ಧರ್ಮ ಮಾನವೀಯತೆಯ ತಳಹದಿಯ ಮೇಲೆಯೇ ತನ್ನ ಸೌಧವನ್ನು ನಿಲ್ಲಿಸಿದ್ದು ಸತ್ಯವಾಗಿದ್ದು ಅದು ಪ್ರಾಣಹೊಂದಿದ ಯಾವುದೇ ಜೀವಕ್ಕೆ ದುಃಖವನ್ನುಂಟು ಮಾಡುವ ಮಾರ್ಗದಲ್ಲಿ ನಾವು ಮರೆಯಬಾರದು.

ಪ್ರಾಣಿ ಜನ್ಮವು ಬಾಳಿ ಬದುಕುವುದಕ್ಕೆ ಯಾವುದೇ ಅಡ್ಡಿ ಆತಂಕಗಳು ಒಡ್ಡದೇ ತಾನೂ ಬಾಳಿ ಬದುಕುವುದರೊಂದಿಗೆ ಇತರರನ್ನು ಬಾಳಲು ಬಿಡಬೇಕು ಮತ್ತು ಬಾಳಲು ಸಹಕರಿಸಬೇಕು. ಭೂಮಿಗೆ ಬಂದವರೆಲ್ಲಾ ಸುಖಿಯಾಗಿ ಬಾಳಬೇಕು. ''ಸರ್ವೇ ಜನ ಸುಖಿನೋ ಭವಂತುಃ'' ಎಂಬ ತತ್ತ್ವ ಸಿದ್ಧಾಂತಗಳನ್ನು ಪಾಲಿಸಬೇಕು. ಧರ್ಮದ ಮೌಲ್ಯಗಳು ಕಾಲ ಕಾಲಕ್ಕೆ ಮತ್ತು ಭೌಗೋಳಿಕ ಪರಿಸರಕ್ಕೆ ತಕ್ಕಂತ ಬದಲಾಗುತ್ತಲೇ ಬಂದಿವೆ. ಒಂದು ಕಾಲದ ಮೌಲ್ಯವು ಇನ್ನೊಂದು ಕಾಲಕ್ಕೆ ಶಿಥಿಲವಾಗಿ ಹಾಸ್ಯಾಸ್ಪದವಾಗುತ್ತದೆ. ಆದರೆ ಹಾಲುಮತ ಧರ್ಮವು ತನ್ನದೇಯಾದ ಮಾನವ ಧರ್ಮವನ್ನು ಯಾವುದೇ ಬದಲಾವಣೆಗೆ ಗುರಿಪಡಿಸದೇ ಅನಾದಿ ಕಾಲದಿಂದ ಇಂದಿನವರೆಗೆ ತನ್ನದೆಯಾದ ಮಾರ್ಗದಲ್ಲಿ ಸಾಗಿ ಬಂದಿರುವುದನ್ನು ಕಾಣುತ್ತವೆ. ಹಾಲುಮತ ಧರ್ಮದ ಜನರ ಬದುಕಿನ ಮೌಲ್ಯಗಳು, ಬಾಳುವಂತಹ ಪದ್ಧತಿಗಳು, ಅನುಸರಿಸಿಕೊಂಡು ಬಂದ ರೀತಿ-ನಿಯಮಗಳಲ್ಲಿ ಅಲ್ಪ ಸ್ವಲ್ಪ ಬದಲಾವಣೆ ಬಂದಿರಬಹುದಾದರೂ ಮೂಲ ಉದ್ದೇಶಕ್ಕೆ ಯಾವುದೇ ಚ್ಯುತಿ ಬಾರದಂತೆ ಸಾಗಿ ಬಂದಿರುವುದನ್ನು ಈ ಧರ್ಮದ ಅಧ್ಯಯನದಿಂದ ತಿಳಿದುಬರುತ್ತದೆ.

''ಸೂರ್ಯ ಸಿದ್ಧಾಂತದ ಪ್ರಕಾರ ಸಮಸ್ತ ಜಗತ್ತಿನ ಉತ್ಪತ್ತಿ ಸ್ಥಿತಿ ಲಯಗಳಿಗೆ ಕಾರಣೀಭೂತನಾದ ಶಿವನಿಂದ ನಿರ್ಮಿಸಲ್ಪಟ್ಟ ಶ್ರೀಮಾನ್ ನಾರಾಯಣನ ನಾಭೀ ಕಮಲದಿಂದ ಹುಟ್ಟಿದ ಬ್ರಹ್ಮನಿಗೆ ೧೦೦ ವರ್ಷ ಆಯುಷ್ಯವಿದೆ. ಇವರಲ್ಲಿ ೫೦ ವರ್ಷ ಕಳೆದು ಮತ್ತೆ ೫೧ನೇ ವಯಸ್ಸಿನಲ್ಲಿ ಮೊದಲ ಮಾಸದ ಪ್ರಥಮ ಪಕ್ಷದ ೧ನೇ ದಿನದಲ್ಲಿ ೧೩ ಘಳಿಗೆ, ೫೩ ಫಳ ೩ ವಿಘಳಗಳು ಕಳೆದಿವೆ ಎಂದು ರಟ್ಟಿಮತ ಹಾಲುಮತ ಶಾಸ್ತ್ರ ಹೇಳುತ್ತಿದೆ.''[೪]

**ಕುರುಬ ಪದದ ನಿಷ್ಪತ್ತಿ**

ಕುರುಬ ಸಮುದಾಯ ವಿವಿಧ ಹೆಸರುಗಳಿಂದ ಕರೆಯಲ್ಪಟ್ಟರೂ ಇವುಗಳ ಶಬ್ದಾರ್ಥಗಳನ್ನು ವಿಶ್ಲೇಷಿಸಿದರೆ 'ಕುರಿ' ಅಥವಾ 'ದನಗಾಯಿ' ವೃತ್ತಿ ಅಥವಾ ಪಾಲನೆಯನ್ನು ಸೂಚಿಸುತ್ತವೆ. ಹಿಂದಿ ಪದದ 'ಗಡಾರಿಯ'ವು ಪ್ರಾಕೃತ್ ಮೂಲದಿಂದ ಬಂದಿದೆ. ಪಾಕೃತದಲ್ಲಿ 'ಗಡಾರ್' ಎಂದರೆ ಕುರಿ ಎಂದರ್ಥ. ಮತ್ತೆ ಕೆಲವು ವಿದ್ವಾಂಸರು ಗಡಾರ್ ಆರ್ಯನ ಗಡಾರ್ಯ ಎಂಬುದಾಗಿ ರೂಪುಗೊಂಡಿದ್ದು. ಆರ್ಯ ಮೂಲದಿಂದ ಬಂದಿದೆ ಎನ್ನುತ್ತಾರೆ. ಹಾಗೆಯೇ ಕುರಿ ಕುರುಬ-ಕುರುಂಬಗಳು ದ್ರಾವಿಡ ಮೂಲದಿಂದ ಬಂದಿದೆ ಎನ್ನುತ್ತಾರೆ. 'ಧನಗರ್' ಪದವು ದನಗಳ ಸಂಪತ್ತನ್ನು ಸೂಚಿಸುತ್ತದೆ. 'ಧನಗರ್' ಎಂದರೆ ಶ್ರೀಮಂತ ಎಂಬ ಅರ್ಥವೂ ಇದೆ. 'ಗಾರ್' ಎಂದರೆ ಪಶುಪಾಲಕ ಅಥವಾ ಮೇಕ್ಷಪಾಲಕರೆಂದು ಸಮಾನ ಅರ್ಥ ನೀಡುತ್ತವೆ. ಮಹಾರಾಷ್ಟ್ರದ ಪುಣೆ ಜಿಲ್ಲೆಯಲ್ಲಿ ದೊರಕಿರುವ ಬೌದ್ಧ ಗುಹಾಶಾಸನದಲ್ಲಿ 'ಧನಗರ್' ಶಬ್ದವನ್ನು ಕೆತ್ತಲಾಗಿದೆ. ಈ ಗುಹೆಯ ಶಾಸನವು ಕ್ರಿ.ಶ. ಒಂದನೇ ಶತಮಾನ ಮತ್ತು ಮೂರನೇ ಶತಮಾನದ ನಡುವೆ ಬರುತ್ತದೆಂದು ಸೂಚಿಸಿದ್ದಾರೆ. ಡಾ. ಬಗವಾನ್ ಲಾಲ್ ಇಂದ್ರಜಿಯವರು 'ಧನಗರ್' ಸಮಾಜದಿಂದಲೇ ಈ ಶಾಸನದ ಪದ ಬಂದಿತೆಂದು ತಿಳಿಸಿದ್ದಾರೆ. 'ಧಾಂಗ್' ಎಂದರೆ ಬೆಟ್ಟ ಅಥವಾ ಪರ್ವತ ಎಂದರ್ಥ ಬರುತ್ತದೆ. ಆದುದರಿಂದ ಇವರು ಗುಡ್ಡಗಾಡಿನಲ್ಲಿ ನೆಲೆಸಿದುದರಿಂದ

ಇವರಿಗೆ 'ಧನಗಾರ್' ಎಂಬ ಹೆಸರು ಬಂದಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಧನಗಾರ್ ಸಮಾಜದ ಒಂದು ಉಪ ಪಂಗಡ 'ನಿಖ್ಖಾರ್' ಇವರು ಬೌದ್ಧ ಮತ್ತು ಬ್ರಾಹ್ಮಣ ಮತಗಳಿಂದ ಸಂಸ್ಕರಣ ಹೊಂದಿ 'ನಿಖ್ಖಾರ್' ರೆಂದು ಕರೆಮಕೊಂಡಿದ್ದಾರೆ. 'ನಿಖ್ಖಾರ್' ಎಂದರೆ ಶುದ್ಧಿಯಾದವರೆಂದು ಅರ್ಥ ಬರುತ್ತದೆ. ಆದರೆ ಇವರು ತಮ್ಮ ಮೂಲ ಸಮಾಜದವರಾದ ಧನಗರ್‌ರ ಹೆಸರುಗಳು ಮತ್ತು ಅನೇಕ ಸಂಪ್ರದಾಯಗಳನ್ನು ಹಾಗೂ ಅವರೊಡನೆ ವಿವಾಹ ಸಂಬಂಧಗಳನ್ನು ಮುಂದುವರೆಯಿಸಿಕೊಂಡು ಬಂದಿದ್ದಾರೆ.

ಅಂದರೆ ಕುರುಬ ಸಮಾಜವೇ ಪ್ರಧಾನವಾಗಿದ್ದ ಸುದೀರ್ಘವಾದ ಮಾನವ ನಾಗರೀಕತೆ ಹಂತವೊಂದಿತ್ತು. ಈ ಹಂತದಲ್ಲಿ ಭಾರತದ ಕುರುಬರು ಜಗತ್ತಿನ ಇತರೆಡೆಗಳ ಕುರುಬರಿಗಿಂತ ಹೆಚ್ಚು ನಾಗರೀಕರಾಗಿದ್ದರು. ರಥಗಳ ಸಂಸ್ಕೃತಿ ಬಾಣಬಿರುಸು, ಗದೆ, ಖಡ್ಗ ಸಂಸ್ಕೃತಿ, ನಗರ ಸಂಸ್ಕೃತಿ ಏರ್ಪಟ್ಟಿದ್ದವು. ಆದ್ದರಿಂದ ಹಾಲುಮತ ಸಂಸ್ಕೃತಿಯು ಜನರೆಂದರೆ ಸಮುದಾಯ ಬದುಕಿನ ಜನ ಎಂದರ್ಥ.

''ಪಾಲ್ ಅಥವಾ 'ಖಿಗ್ಗೇರ್' ಎಂದು ಕರೆಯಿಸಿಕೊಳ್ಳುತ್ತಿರುವ ಕುರುಬರು ವಿಶೇಷವಾಗಿ ಉತ್ತರ ಭಾರತದಲ್ಲಿದ್ದಾರೆ. ಪಾಲ್ ಅಥವಾ 'ಖಿಗ್ಗೇಲ್' ಎಂಬ ಅಂಕಿತವನ್ನು ತಮ್ಮ ಹೆಸರಿನ ಮುಂದೆ ಸೇರಿಸಿಕೊಳ್ಳುತ್ತಾರೆ. 'ಪಾಲ್' 'ಹಾಲ್' ಈ ಎರಡು ಪದಗಳು ಒಂದೇ ಶಬ್ದಾರ್ಥ ಕೊಡುತ್ತವೆ.

ಇವುಗಳ ಮೂಲ ಅರ್ಥ ಕುರಿ ಅಥವಾ ಮೇಷಪಾಲನೆಯಾಗಿದೆ. ಖಿಗ್ಗೇರ್ ಎಂದರೆ 'ಸಿಂಹದ ಶಕ್ತಿ' ಧೈರ್ಯದ ಸಂಕೇತವಾಗಿದೆ. ಇದು ವಿಶೇಷವಾಗಿ ಉತ್ತರ ಪ್ರದೇಶದಲ್ಲಿ ಕಂಡುಬರುತ್ತದೆ. ಇವರು ಬಹಳ ಹೆಮ್ಮೆಯಿಂದ ತಾವೂ ಪಾಲಕ್ಷತ್ರೀಯ ಮರಾಠಾ ಕ್ಷತ್ರೀಯ ಮತ್ತು ಠಾಕೂರರೆಂದು ಕರೆದುಕೊಳ್ಳುತ್ತಾರೆ.

ಇವರ ವಂಶಾವಳಿಯನ್ನು ಪರಿಶೀಲಿಸಿದಾಗ ಇವರು ಕ್ಷತ್ರೀಯ ಶಾಖೆಗೆ ಸೇರಿದವರೆಂದು ತಿಳಿದುಬರುತ್ತದೆ. ಕ್ಷತ್ರೀಯ ಮತ್ತು ವೈಶ್ಯರ ರೀತಿಯ ಗೋತ್ರಗಳನ್ನು ಹೊಂದಿದ್ದಾರೆ. ಮತ್ತೊಂದು ವಿಚಾರದ ಪ್ರಕಾರ ಮೊಘಲರ ಆಳ್ವಿಕೆಯನ್ನು ವಿರೋಧಿಸಿ, ಕಾಡಿಗೆ ಪಲಾಯನ ಮಾಡಿದರು. ಮುಂದೆ ಇವರು ಜೀವನೋಪಾಯಕ್ಕೆ ಪಶುಪಾಲನೆ ವೃತ್ತಿಯಲ್ಲಿ ತೊಡಗಿದರೆಂದು ತಿಳಿದುಬರುತ್ತದೆ. ಇವರೇ ಇಂದಿನ ಅಹೀರರು ಅಥವಾ ಗಡಾರಿಯರೆಂದು ಹೇಳುತ್ತಾರೆ.[೬]

ಕುರುಬರು ಬುಡಕಟ್ಟು ಜನರಾದ್ದರಿಂದಲೇ ಎಲ್ಲಾ ದೇಶಗಳಲ್ಲೂ ಮೊದ ಮೊದಲಿಗೆ ರಾಜ್ಯಕಟ್ಟಿ ಆಳಿದವರಾಗಿದ್ದಾರೆ. ಅಂದು ವಿಭಿನ್ನ ಕುಲಗಳ ಗೋಪಾಲಕರು. ಧನಗರರು. ಕುರಿಪಾಲಕರು. ತಮ್ಮದೆ ಸಮುದಾಯಗಳನ್ನು ಹೊಂದಿದ್ದು ಸಣ್ಣ-ಪುಟ್ಟ-ಪಾಳೇಯ ಪಟ್ಟುಗಳನ್ನು ಸ್ಥಾಪಿಸಿಕೊಂಡಿದ್ದರು. ಇದು ಕ್ರಿಸ್ತಶಕದ ನಂತರದ ಸ್ಥಿತಿ ಆಗಿದೆ. ಹೀಗೆ ಕುರುಬರು ಸಮಾಜ ರಾಜ್ಯ ಗುರುವರ್ಗ ಆಡಳಿತ ಸೇನೆ ಶ್ರೇಷ್ಠಿಗಳು, ವೈಶ್ಯರು ಕಾರ್ಮಿಕರು ರೈತರು ಪಶುಪಾಲಕರು ಎಂಬ ವೃತ್ತಿಗಳನ್ನು ಸಂಬಂಧಗಳ ಸಾಂಸ್ಥೀಕರಣಗಳನ್ನೂ ಹುಟ್ಟು ಹಾಕಿದರು.[೭]

ಹಾಲಿನ ಮೂಲದ ಸಮುದಾಯಗಳು ಹಾಲುಮತವಾಗಿದ್ದರೆ ನೀರಿನ ಮೂಲದ ಸಮುದಾಯಗಳು ನೀರು ಮತ ಅಥವಾ ಗುಂಗಾಮತವಾಗಿರುವುದು ವಿಶ್ವದ ಜೀವಜಗತ್ತು ಬದುಕಿಗಾಗಿ ಹಾಲು ಮತ್ತು ನೀರನ್ನು ಅವಲಂಬಿಸಿದೆ. ಹೀಗಾಗಿ ಹಾಲು ಮತ್ತು ನೀರಿನ ಮತಗಳು ವಿಶ್ವಮತಗಳು ಆಗುವುವು. ಇವು ಪ್ರಕೃತಿ ಜನ್ಯ ಮತಗಳು, ಹಾಲು

ಮತ್ತು ನೀರಿಗೆ ಅವಿನಾಭಾವ ಸಂಬಂಧವಿರುವುದು. ಹಾಲನ್ನು ಕಾಯಿಸಿ ನೀರನ್ನು ಹಾಲಿನಿಂದ ಬೇರ್ಪಡಿಸಿದಾಗ ಹಾಲು ಉಕ್ಕುವುದು. ಅದಕ್ಕೆ ನೀರು ಬೆರೆಸಿದಾಗ ಅದು ಶಾಂತವಾಗುವುದು. ಹಾಲು ನೀರಿನ ಹಿನ್ನೆಲೆಯ ಮತಗಳು ಕರ್ನಾಟಕದಲ್ಲಿ ಕಾಣಸಿಗುವುವು. ಹಾಲುಮತವನ್ನು ಕುರುಬ, ಕುರುಮಾನ್ಯ, ಕಾಡು ಕುರುಬ, ಜೇನು ಕುರುಬ, ಕಾಟ್ಟು ನಾಯಕನ, ಗೊಂಡ ಮತ್ತು ರಾಜಗೊಂಡ ಇತ್ಯಾದಿ ಬುಡಕಟ್ಟುಗಳು ಹಾಗೂ ಕುರುಬ ಸಮುದಾಯದ ಕಳ್ಳುಬಳ್ಳಿಯ ಸಮುದಾಯಗಳು ತಮ್ಮ ಮತವೆಂದು ನಂಬಿ ನಡೆದುಕೊಳ್ಳುವುವು. ಕುರಿ, ಆಡು, ದನ, ಎಮ್ಮೆ ಸಾಕಾಣಿಕಾದಾರರ ಮತ ಕುರುಬ ಜನಾಂಗದ ಮೂಲವೆಂದರೆ ಮಾನವ ಜನಾಂಗದ ಮೂಲವೆಂದೇ ಹೇಳಬೇಕಾಗುತ್ತದೆ. ಬೇಟೆಗಾರಿಕೆಯಿಂದ ಕವಲೊಡೆದ ಪಶುಪಾಲಕರೇ ಕುರುಬರ ಮೂಲಿಗರು ಇವರೇ ಹಾಲುಮತದ ಸ್ಥಾಪಕರಾಗಿದ್ದಾರೆ.[೮]

ಗೊಂಡ ಪದದ ಒಳಾರ್ಥವನ್ನು ಒಡೆದು ನೋಡಿದಾಗ ಅದರ ಅರ್ಥ ಸೃಷ್ಟಿಯಾಗುವುದು. ಅದರ ಮೂಲ 'ಗೋ+ಅ' ಎಂಬೆರಡಕ್ಷರಗಳಿಂದ ಉಂಟಾಗಿರಬಹುದು. ಕನ್ನಡ ನಿಘಂಟುಗಳಲ್ಲಿ 'ಗೋ' ಎಂದರೆ ಗೋವು, ಭೂಮಿ, ಬೆಟ್ಟ ಮತ್ತು 'ಅ' ಅಂದರೆ ಅಜ (ಆಡು ಅಥವಾ ಮೇಕೆ, ಮೇಷ ಕುರಿ) ಎಂಬರ್ಥಗಳಿವೆ. ಗೋವು (ದನ)ಗಳ ಪಾಲಕರು ಗೋಪಾಲಕರು ಅಥವಾ ದ(ಧ)ನಗರರಾದರೆ ಅಜ (ಕುರಿ)ಗಳ ಪಾಲಕರು ಅಜಪಾಲಕರು ಅಥವಾ ಕುರಿಗಾರರು ಆಗಿರುವರು. ಕುರಿಗಾರರು ದ(ಧ)ನಗಾರರು ಬೇರೆಯಲ್ಲ. ಅವರು ಮೂಲತಃ ಪಶುಪಾಲಕರೆಂದರ್ಥ.

ಗೊಂಡರ ಪೈಕಿ ರಾಜಗೊಂಡ ಎಂಬ ಧನಗರ ಬುಡಕಟ್ಟು ಅತ್ಯಂತ ಪ್ರಸಿದ್ಧವಾದ ಕುರುಬ ವರ್ಗವಾಗಿದೆ. ಈ ರಾಜಗೊಂಡರು ಪ್ರಾಚೀನ ಕಾಲದಲ್ಲಿ ಮಧ್ಯ ಭಾರತದ ರಾಜಮನೆತನಗಳಿಗೆ ವೈದ್ಯರಾಗಿದ್ದಾರೆಂದು ಪ್ರತೀತಿ. ಹೀಗಾಗಿ ಇವರನ್ನು ರಾಜಗೊಂಡರೆಂದು ಕರೆಯಲಾಗಿದೆ.

ಗೊಂಡ, ರಾಜಗೊಂಡ, ಕುರುಬ, ಕಾಡುಕುರುಬ, ಜೇನು ಕುರುಬ, ಬೆಟ್ಟಕುರುಬ, ಮುಳ್ಳು ಕುರುಬ, ಕಂಬಳಿ ಕುರುಬ, ಒಕ್ಕೆ ಕುರುಬ, ಹಾಲು ಕುರುಬ, ಜಾಡಿ ಕುರುಬ, ಹಂಡೆ ಕುರುಬ, ಧನಗರ, ಹಟಗಾರ, ಕರಗಾರ, ಫುಲೇಕರ, ಮ್ಯಾಸ ನಾಯಕ, ಗೊಲ್ಲ ಇವರೆಲ್ಲರೂ ಮೂಲತಃ ಒಂದೇ ಆಗಿದ್ದು ಹಾಲುಮತದ ಮೂಲದವರಾಗಿದ್ದಾರೆ.

**ಹುಟ್ಟು**

ಹಾಲುಮತ ಮೂಲದಿಂದ ಬೇರೆ ಬೇರೆ ಉದ್ಯೋಗ, ಕಸುಬುಗಳು ಕವಲೊಡೆದು ಬೆಳೆದವು ಎನ್ನುವ ವಿವರಣೆಗಳಿವೆ. ಮುದ್ದಪ್ಪ-ಮುದವ್ವೆಯರಿಗೆ ಹುಟ್ಟಿದ ಒಂಭತ್ತು ಜನ ಮಕ್ಕಳು ಹೇಗೆ ಉದ್ಯೋಗ ವಿಭಜನೆಮಾಡಿಕೊಂಡರು ಎನ್ನುವ ಕುತೂಹಲಕರ ವಿಶ್ಲೇಷಣೆ ಇಲ್ಲಿದೆ.

ಮೊದಲನೆಯ ಮಗ ಮುದಗೊಂಡನ ವಂಶ ರಾಜ್ಯಭಾರದಲ್ಲಿ ತೊಡಗಿದರು.

ಎರಡನೇಯ ಮಗ ಅಜಗೊಂಜನ ವಂಶ ಒಕ್ಕಲುತನದಲ್ಲಿ ತೊಡಗಿದರು

ಮೂರನೇಯ ಮಗ ಅದಿಗೊಂಡನ ವಂಶಜರು ಕೂಲಿ ಕುಂಬಳ ಮಾಡುವವರಾದರು.

ನಾಲ್ಕನೇಯ ಮಗ ಅನಾದಿಗೊಂಡನ ವಂಶಜರು ಅಷ್ಟಾಂಗ ಯೋಗಬಲ್ಲ ಸಿದ್ಧಿಪುರುಷರಾದರು.

ಐದನೇಯ ಮಗ ಪ್ಯಾಮಗೊಂಡನ ಸಂತತಿ ಕುಡವಕ್ಕಲಿಗರಾದರು.

ಆರನೇಯ ಮಗ ದ್ಯಾಮಗೊಂಡನ ಸಂತತಿ ಸುಡುಗಾಡು ಸಿದ್ಧರಾದರು.

ಏಳನೇಯ ಮಗ ನೇಮಗೊಂಡನ ಸಂತತಿ ಗೌಲೆತ್ತಿನವರಾದರು.

ಎಂಟನೇಯ ಮಗ ಲಕ್ಕೊಂಡನ ವಂಶಜರು ಹೆಳವರಾದರು. ಹಾಗೂ

ಒಂಬತ್ತನೆಯ ಮಗ ಪದ್ಮಗೊಂಚನ ಸಂತತಿ ಕುರಿಕಾಯುವ ಉದ್ಯೋಗದಲ್ಲಿ ತೊಡಗಿದರು. ಹೀಗೆ ಪದ್ಮಗೊಂಚನ ಮಕ್ಕಳಿಂದ ಹಿಡಿದು ಇಲ್ಲಿಯವರೆಗೆ ಕುರಿಗಳ ಸಾಕಾಣಿಕೆಯನ್ನು ಮುಂದುವರೆಸಿರುವುದರಿಂದ ಇವರಿಗೆ ಕುರುಬರು (ಹಾಲುಮತ) ಎಂದು ಹೆಸರು ರೂಢಿಯಾಯಿತು.[೯]

ಹಾಲುಮತದ ಸಿದ್ಧಾಂತಗಳು, ಮತ್ತು ಹುಟ್ಟಿನ ಬಗ್ಗೆ ಡೊಳ್ಳಿನ ಹಾಡುಗಳಲ್ಲಿ ಅನೇಕ ವಿಷಯಗಳು ಸಿಗುತ್ತವೆ.

ಮುದ್ದಪ್ಪ ಮುದ್ದವ್ವರ ಹೊಟ್ಟೆಯಿಂದ ಆದಿಮಗೊಂಡ ಆತನ ಹೊಟ್ಟೆಯಿಂದ ಆರು ಜನ ಮಕ್ಕಳು ಹುಟ್ಟುತ್ತಾರೆ. ಮುಂದೆ ಇವರೇ ಹಾಲುಮತವನ್ನು ಬೆಳೆಸಿದರೆಂದು ಮತ್ತೊಂದು ಸನ್ನಿವೇಶದಲ್ಲಿ ಹೇಳಲಾಗುತ್ತದೆ. ಇದರಲ್ಲಿ ಪದ್ಮಗೊಂಡ ಎನ್ನುವ ಪಾತ್ರ ಬಹಳ ಮುಖ್ಯವಾಗಿದೆ. ಈ ಹಾಲುಮತದಲ್ಲಿ

೧. ಹತ್ತಿಕಂಕಣ

೨. ಉಣ್ಣೆಕಂಕಣ

ಇವೆರಡು ಸಂಪ್ರದಾಯಕ್ಕೂ ಇವನೇ ಪ್ರಮುಖನಾಗಿದ್ದಾನೆ.

ಇವನ ಮಕ್ಕಳು ಕುರಿಗಳನ್ನು ಮೇಯಿಸಿ ಹಸಿವಿನಿಂದ ಬಳಲುತ್ತಾರೆ. ಹಸಿವಿನಿಂದ ಶಿವಸ್ಮರಣೆ ಮೊದಲು ಶಿವ ಒಲಿದು ಆಗ ತಾನೇ ಜನಿಸಿದ ಕುರಿಯೊಂದನ್ನು ಹಿಡಿದು ಗಿಣ್ಣ ಕಾಯಿಸುತ್ತಾನೆ. ಗಿಣ್ಣ ಕಾಯಿಸಲು ಬೆಂಕಿ ಬೇಕಾದಾಗ ಅದನ್ನು ತರಲು ಪರಮಾತ್ಮನು ಪದ್ಮನನ್ನು ಕಾಡಿಗೆ ಕಳುಹಿಸುತ್ತಾನೆ. ಕಾಡಿನಲ್ಲಿ ಬಂಕಾಪೂರ ಎನ್ನುವ ಪಟ್ಟಣದಲ್ಲಿ ಇರುವಂತಹ ರಾಜನ ಮಗಳು ಸುಮಲಾದೇವಿ ರಾಕ್ಷಸಿಯ ವಶದಲ್ಲಿರುತ್ತಾಳೆ. ಅವರಿಬ್ಬರಲ್ಲಿ ಪರಸ್ಪರ ಪ್ರೀತಿ ಬೆಳೆದು ಮದುವೆಯಾಗುತ್ತದೆ.

ಕಾಡಿನಲ್ಲಿಯೇ ಕುರಿಯ ಉಣ್ಣೆಯಿಂದ ದಾರವನ್ನಾಗಿ ಮಾಡಿ ಕಂಕಣ ಕಟ್ಟುತ್ತಾನೆ. ಹೀಗೆ 'ಉಣ್ಣೆ ಕಂಕಣ' ಎನ್ನುವಂತಹ ಸಂಪ್ರದಾಯ ಬೆಳೆದು ಬಂದಿತು. ಇದಕ್ಕೂ ಮೊದಲು ಗ್ರಾಮದಲ್ಲಿ ಮದುವೆಯಾಗಿದ್ದರಿಂದ ಆ ಸಂಬಂಧಕ್ಕೆ 'ಹತ್ತಿ ಕಂಕಣ' ಸಂಬಂಧ ಎನ್ನುವರು. ಇವೆರಡು ಸಂಬಂಧಗಳು ಹಾಲುಮತದಲ್ಲಿ ಬೆಳೆದುಕೊಂಡು ಬಂದವು.

ವೀರಣ್ಣ ದಂಡೆಯವರಿಂದ ಸಂಪಾದಿಸಲ್ಪಟ್ಟ 'ಜನಪದ ಹಾಲುಮತ ಮಹಾಕಾವ್ಯ' ಸದ್ಯಕ್ಕೆ ಹಾಲುಮತದ ಅಧಿಕೃತ ಮಾಹಿತಿಯನ್ನೊದಗಿಸುವ ಮೂಲ ಆಕರ ಗ್ರಂಥವಾಗಿ ಮೌಖಿಕ ರೂಪದಲ್ಲಿ ತಿಳಿಸುತ್ತದೆ. ನಿಸರ್ಗದ ಒಂದೊಂದೇ ಅಂಶಗಳು ಹುಟ್ಟುತ್ತಾ ಗಾಳಿ, ಭೂಮಿ, ಆಕಾಶಗಳ ಸೃಷ್ಟಿಯ ನಂತರ ಮುಂದೆ ಬ್ರಹ್ಮ, ವಿಷ್ಣು,

ರುದ್ರ, ಮಹೇಶ, ಮಹಾದೇವ, ಇವರುಗಳ ಜೊತೆ ಹಾಲುಮತದ ಪೂಜ್ಯ ಹಿರಿಯನಾದ ಶಾಂತಮುತ್ತ್ಯಾನ ಜನನ ಕೈಲಾಸದಲ್ಲಿಯೇ ಆಯಿತೆಂದು ಹೇಳಲಾಗುತ್ತದೆ. ಈ ಶಾಂತಮುತ್ತ್ಯಾನೇ ಅಲ್ಲಿ ಜನಿಸಿದಂತಹ ರಾಕ್ಷಸರನ್ನು ಕೊಂದು ಹಾಲುಮತದ ಜೊತೆಗೆ ಸಂಬಂಧ ಬೆಳೆಸಿಕೊಂಡಿರುವ ಕುರಿಗಳನ್ನು ಡೊಳ್ಳು ಮತ್ತು ಕಂಬಳಿಗಳನ್ನು ತಯಾರಿಸಿದ ಎನ್ನುವ ಪೌರಾಣಿಕ ಕಥೆಯಿಂದ ತಿಳಿದುಬರುತ್ತದೆ.

**ಹಾಲುಮತದ ಪರಂಪರೆ**

ಶಾಂತಮುತ್ತ್ಯಾ ನಿರ್ಮಿಸಿದ ಕುರಿಗಳನ್ನು ಬ್ರಹ್ಮ, ವಿಷ್ಣು, ಶಿವ, ಮುಂತಾದವರು ಕಾಯುತ್ತಾ ಕೊನೆಗೆ ಪಾರ್ವತಿಯ ಪಾಳಿ ಬರುತ್ತದೆ. ಆಕೆ ಆ ಕುರಿಗಳನ್ನು ಕಾಯುತ್ತ ಆಕಾಶದ ಬಾಗಿಲು ತೆರೆದು ಭೂಲೋಕಕ್ಕೆ ಹೊಡೆತರುತ್ತಾಳೆ. ಮತ್ತು ಭೂಮಿಯ ಒಂದು ಹುತ್ತಿನಲ್ಲಿ ಅವುಗಳನ್ನು ಹೊಗಿಸುತ್ತಾಳೆ. ಇಲ್ಲಿ ಭೂಮಿಯ ಮೇಲೆ ಮೊದಲು ಪಾದಾರ್ಪಣೆ ಮಾಡಿದಾಕೆ ಹೆಣ್ಣು-ಪಾರ್ವತಿ ಮತ್ತು ಪ್ರಾಣಿ ಸಂತತಿಯಾಗಿ ಭೂಮಿಯಲ್ಲಿ ಕಾಣಿಸಿಕೊಂಡ ಭೂಮಿಯ ಗರ್ಭದಲ್ಲಿ ಕುರಿಗಳು ವಾಸವಾದವು ಎಂಬ ಸಂಗತಿಗಳನ್ನು ಮುಖ್ಯವಾಗಿ ಪ್ರತಿಬಿಂಬಿಸಲು ಪ್ರಯತ್ನಮಾಡಲಾಗಿದೆ.

ಕುರಿಗಳನ್ನು ಹುತ್ತಿನಲ್ಲಿ ಹೊಗಿಸಿ ಭೂಮಿಯ ಮೇಲೆ ಕುಳಿತುಕೊಂಡ ಪಾರ್ವತಿ ತನ್ನ ಬಲಕಿನ ಕೈಯಿಂದ ಭೂಮಿಯ ಮಣ್ಣನ್ನು ಹಿಡಿದು. ತನ್ನ ಎಡಕಿನ ಕೈಯಿಂದ ಬಲಮೊಲೆಯ ಹಾಲನ್ನು ಹಿಂಡಿ ಕೆಸರು ಮುದ್ದೆ ಮಾಡುತ್ತಾಳೆ. ಹಾಗೆಯೇ ಎಡಕಿನ ಕೈಯ ಮಣ್ಣಿಗೆ ಬಲಗೈಯಿಂದ ಎಡಕಿನ ಮೊಲೆಯ ಹಾಲನ್ನು ಹಿಂಡಿ ಕೆಸರು ಮುದ್ದೆ ಮಾಡುತ್ತಾಳೆ. ಬಲಗೈ ಮಣ್ಣಿನಿಂದ ಗಂಡು ಬೊಂಬೆಯನ್ನು, ಎಡಗೈ ಮಣ್ಣಿನಿಂದ ಹೆಣ್ಣು ಬೊಂಬೆಯನ್ನು ನಿರ್ಮಾಣ ಮಾಡುತ್ತಾಳೆ. ಅಷ್ಟೊತ್ತಿಗೆ ಅಲ್ಲಿಗೆ ಬಂದ ಶಿವನಿಂದ ಮಂತ್ರಿಸಿ. ಆ ಬೊಂಬೆಗಳಿಗೆ ಜೀವ ತುಂಬಿಸುತ್ತಾಳೆ. ಅವಕ್ಕೆ ''ಮುದ್ದವ್ವ - ಮುದ್ದುಗೊಂಡನೆಂದು ಹೆಸರಿಡುತ್ತಾರೆ'' ಇವರೇ ಹಾಲುಮತದ ಮೂಲ ಪುರುಷರು ಎಂದು ಹೇಳಲಾಗುತ್ತದೆ.

ಮುದ್ದವ್ವ-ಮುದ್ದಗೊಂಡ ಒಕ್ಕಲುತನ ಮಾಡಿಯೇ ಬದುಕನ್ನು ಸಾಗಿಸುತ್ತಿದ್ದರು ಎಂದು ಹೇಳುವ ಕಥೆ ಇವರ ಮಗ ಪದಮಗೊಂಡ ಅಡವಿಯಲ್ಲಿ ನೇಗಿಲು ಹೊಡೆಯಲು ಹೋಗಿ ಒಂದು ಹುತ್ತ ಸೀಳಿದ್ದರಿಂದ, ಅಲ್ಲಿ ಪಾರ್ವತಿ ಹೊಗಿಸಿದ್ದ ಕುರಿಗಳು ಅನೇಕ ಸಂಖ್ಯೆಯಲ್ಲಿ ಆಗಿ ಹೊರಬಂದವೆಂದು ಹೇಳಲಾಗುತ್ತದೆ. ಇಲ್ಲಿ ಭೂಮಿಯ ಗರ್ಭ ಸೇರಿದ್ದ ಕುರಿಗಳು ಪುನಃ ಭೂಮಿಯ ಮೇಲೆ ಕಾಣಿಸಿಕೊಂಡಿದ್ದು ಪೌರಾಣಿಕ ಸೃಷ್ಟಿಯಂತೆಯೇ ಇದೆ.

ಮುಂದೆ ಕುರಿ ಕಾಯುತ್ತ ಹೊರಟ ಪದುಮಗೊಂಡನಿಗೆ ಹಾಲು ಹಿಂಡಿಕೊಳ್ಳುವ ಗಿಣ್ಣ ಮಾಡುವ ಪರಿಗಳನ್ನು ಕಲಿಸಿದ್ದಲ್ಲದೆ. ಶಿವನು ಶಿವಲಿಂಗಮ್ಮನ ಜೊತೆ ಪದುಮಗೊಂಡನ ಮದುವೆ ಮಾಡುತ್ತಾನೆ. ಸುರಗಿಸುತ್ತಲು ನೂಲು ಸಿಗದಿದ್ದಾಗ ಉಣ್ಣೆಯ ಕಂಕಣವನ್ನು ಕಟ್ಟಿದರೆಂದು ಹೇಳಿ, ಕುರುಬ ಜನಾಂಗದಲ್ಲಿರುವ ಹತ್ತಿ ಕಂಕಣ. ಮತ್ತು ಉಣ್ಣೆಕಂಕಣ, ಪಂಗಡಗಳಿಗೆ ಮತ್ತೊಂದು ಪೌರಾಣಿಕ ನೆಲೆಯನ್ನು ಒದಗಿಸಲಾಗುತ್ತದೆ. ಈ ದಂಪತಿಗಳು ತಮಗೆ ಹುಟ್ಟಿದ ಮಗುವಿಗಾಗಿ ಹುಟ್ಟುಗಂಬಳಿನೇಯುವ ಕೆಲಸಮಾಡುತ್ತಾರೆ. ಇವರು ನೇಯ್ದ ಕಂಬಳಿಯೇ ಭೂಮಿಯ ಮೇಲೆ ತಯಾರಾದ ಮೊದಲ ಕಂಬಳಿ ಎನಿಸುತ್ತದೆ.

ಹಾಲುಮತ ಕಾವ್ಯದ ನಾಯಕನ ಸೃಷ್ಟಿಗೆ ಕಾರಣನಾದವನೂ ಶಿವನೇ, ಶಿವನ ದೈಹಿಕ ಸಂಪರ್ಕವಿಲ್ಲದೆ ಕೇವಲ ಲೀಲಾ ಸದೃಶವಾಗಿ ಕಮಳಾದೇವಿ ಗರ್ಭಧರಿಸಿದಳೆಂದು ಕಾವ್ಯ ಹೇಳುತ್ತದೆ. ಆದರೆ ಈಕೆ ಗಂಡನಿಲ್ಲದೆ ಬಸುರಿ ಹೇಗಾದಳು? ಎಂಬ ಪ್ರಶ್ನೆ ಎದುರಾಗುತ್ತದೆ. ಅದಕ್ಕಾಗಿ ದಾಸಿಯರು. ಅರಸನಿಗೆ ತಿಳಿಯದಂತೆ ಕೊರವಂಜಿಯ ವೇಷದಲ್ಲಿರುವ ಪಾರ್ವತಿಯ ಬುಟ್ಟಿಗೆ ಈ ಮಗುವನ್ನು ಹಾಕುತ್ತಾರೆ. ಆದರೆ ಶಿವನು ದಾರಿಯಲ್ಲಿ ಹದ್ದಾಗಿ ಹಾರಿ ಬಂದು ಬುಟ್ಟಿಯಲ್ಲಿರುವ ಕೂಸನ್ನು ಅಪಹರಿಸುತ್ತಾನೆ.

ಅಪಹರಿಸಿದ ಈ ಕೂಸನ್ನು ಜಂಬೂದ್ವೀಪದ ಒಂದು ಕೊಳದ ಕಮಲದ ಹೂವಿನಲ್ಲಿ ಮಲಗಿಸುತ್ತಾನೆ. ಶಿವನ ಪೂಜಾರಿಯಾದ ಕಾಳಿನಾರಾಯಣನಿಂದ ಕಮಲದ ಹೂವಿನ ಜೊತೆ ಕೂಸು ಕೈಲಾಸಕ್ಕೆ ಬರುವಂತೆ ಮಾಡಿ ಈ ಕೂಸನ್ನು ಸಲುಹಲು ಪಾರ್ವತಿಗೆ ಒಪ್ಪಿಸುತ್ತಾನೆ.

ಬಾಳಭರಮ ಮತ್ತು ಸೂರಮ್ಮ ದೇವಿಯರು ಶಿವನ ಬೆವರನ್ನು ಸೇವಿಸಿದಾಗ ಬೀರಪ್ಪ ಗರ್ಭದಲ್ಲಿ ಮೂಡುತ್ತಾನೆ. ಬೀರಪ್ಪನಿನ್ನೂ ಗರ್ಭದಲ್ಲಿರುವಾಗಲೇ ಅವನನ್ನು ಸಂಹರಿಸಲು ಸೋದರಮಾವ ಪ್ರಯತ್ನಿಸುತ್ತಾನೆ. ಆಗ ಬೀರಪ್ಪನು ತನ್ನ ತಾಯಿಯ ಕನಸಿನಲ್ಲಿ ಅದನ್ನೆಲ್ಲ ಹರಹುತ್ತಾನೆ. ಬಾಣಂತನದ ಸಮಯದಲ್ಲಿ ಕೂಸನ್ನು ಕೊಲ್ಲಲು ಕಾಳಿ ನಾರಾಯಣನು ಸೂಲಗಿತ್ತಿಯರನ್ನು ಕಳುಹಿಸಿದರೆ, ಬೀರಪ್ಪನು ಗರ್ಭದಿಂದ ಸಿಡಿದು ನಿಂತು ಸೂಲಗಿತ್ತಿಯರನ್ನು ಒದ್ದೋಡಿಸಿ ಮತ್ತೆ ಮಗುವಾಗಿ ತಾಯಿಯ ಮಗ್ಗುಲಲ್ಲಿ ಮಲಗುತ್ತಾನೆ.

ಕೊನೆಗೆ ಸೋದರಮಾವನು ಮಗುವಿನ ಹಣೆ ಬರಹ ಸೆಟ್ಟಗಿಲ್ಲವೆಂದು ತಂಗಿಗೆ ಹೇಳಿ ಅದನ್ನು ಅರಣ್ಯದಲ್ಲಿ ಬಿಟ್ಟುಬರಲು ಪೈಲವಾನರನ್ನು ಕಳುಹಿಸುತ್ತಾನೆ. ತಾಯಿ ಕೂಸನ್ನು ಅರಣ್ಯಕ್ಕೆ ಸಾಗಿಸಲು ತೊಟ್ಟಿಲಲ್ಲಿ ಹಾಕಿ ಕೊಡುತ್ತಾಳೆ. ನಾಲ್ಕು ಜನ ಪೈಲವಾನರಿಗೆ ಈ ತೊಟ್ಟಿಲು ಏಳದೇ ಇದ್ದಾಗ ತಾಯಿ ಕೈ ತಾಗಿಸಿದರೆ ತೊಟ್ಟಿಲು ಹಗುರವಾಗಿ ಏಳುತ್ತದೆ. ಪೈಲವಾನರು ಈ ತೊಟ್ಟಿಲನ್ನು ವನಕ್ಕೆ ಸಾಗಿಸಿ ಒಣಗಿದ ಕಂಚಿ ಆಲದ ಮರದ ಟೊಂಗೆಗೆ ಕಟ್ಟಿಬರುತ್ತಾರೆ. ಆ ಮರ ಚಿಗಿತು ನಿಲ್ಲುತ್ತದೆ. ಶಿವ ಪಾರ್ವತಿಯರು ಬಂದು, ಜೇನನ್ನು ಕೂಸಿನ ಬಾಯಿಗೆ ಬೀಳುವಂತೆ ವ್ಯವಸ್ಥೆ ಮಾಡುತ್ತಾರೆ.

ಈ ಕಾವ್ಯದ ಇನ್ನೊಬ್ಬ ಪ್ರಮುಖ ವ್ಯಕ್ತಿಯಾದ ಮಾಳಿಂಗರಾಯನ ಜನನವು ಪೌರಾಣಿಕ ಆಶಯಗಳಿಂದ ಕೂಡಿದೆ. ಶಿವ ಪಾರ್ವತಿಯರು ತಮ್ಮಲ್ಲಿರುವ ಒಂದೊಂದು ಮಣಿಗಳನ್ನು ಕೊಡಲಾಗಿ ಅವನ್ನು ಜಗುಲಿಯ ಮೇಲೆ ಕೂಡಿಸಿ ಇಟ್ಟಾಗ ಜಕ್ಕಪ್ಪ ಮತ್ತು ಮಾಳಪ್ಪರಾಗಿ ಜನ್ಮ ತಾಳಿರುತ್ತಾರೆ. ಹೀಗೆ ಈ ಕಾವ್ಯದ ಪ್ರಮುಖ ಪಾತ್ರಗಳಾದ ಬಾಳಭರಮ, ಬೀರಪ್ಪ ಮತ್ತು ಮಾಳಿಂಗರಾಯರ ಹುಟ್ಟು ಪೌರಾಣಿಕ ಆಶಯಗಳಿಂದ ಕೂಡಿವೆ. ಈ ನಿರೂಪಣೆಯಿಂದಾಗಿ ಇಲ್ಲಿಯ ವ್ಯಕ್ತಿತ್ವಗಳ ಶಕ್ತಿಗೆ ಒಂದು ಅಲೌಕಿಕ ಸ್ಪರ್ಶ ಪ್ರಾರಂಭದಿಂದಲೇ ಲೇಪನಗೊಂಡಂತಾಗಿರುತ್ತದೆ. ಜೊತೆಗೆ ಇವರ ಸಾವಿನ ಸಂಗತಿಗಳನ್ನು ಈ ಕಾವ್ಯ ಹೇಳುವುದೇ ಇಲ್ಲ. ಕಥೆ, ಬೆಳೆದಂತೆಲ್ಲಾ ಆಯಾ ಪಾತ್ರದ ಬೆಳವಣಿಗೆಗಳು ಅಲ್ಲಲ್ಲಿಯೇ ಕರಗಿ ಹೋಗುತ್ತವೆ.

ಮಾಯವ್ವ ಸ್ವರ್ಗದ ದಂಪತಿಗಳ ಕೂಸಾಗಿಯೂ ಕೆಟ್ಟ ಹಣೆಬರಹ ಹೊಂದಿದ್ದರಿಂದ ಭೂಲೋಕದಲ್ಲಿ ಸಮುದ್ರದ ಪಾಲಾಗುತ್ತಾಳೆ. ಸಮುದ್ರದ ದಂಡೆಯಲ್ಲಿ ಒಬ್ಬ ಋಷಿಗೆ ದೊರೆತ ಈ ಕೂಸು. ನಂತರ ಕುರಿ ಕಾಯುವ ದಿಬರಾಯನ ಏಳು ಮಂದಿ ಹೆಣ್ಣು ಮಕ್ಕಳಿಗೆ ದೊರೆಯುತ್ತದೆ. ಈ ಕೂಸನ್ನು ಎತ್ತಿಕೊಂಡು ಮನೆಗೆ ಒಯ್ದರೆ ಗರ್ಭಧರಿಸದೇ ಒಣಗಿ ನಿಂತ ಕುರಿಗಳ ಹಿಂಡಿನ ಲಕ್ಷಣ ಒಂದೇ ರಾತ್ರಿಯಲ್ಲಿ ಬದಲಾಗುತ್ತದೆ. ಮುಂದೆ ಅವು ಗರ್ಭ ಧರಿಸುತ್ತವೆ. ಮಾಯವ್ವಳ ಪ್ರವೇಶದಿಂದಾಗಿ ಸಂತತಿ ಫಲಿಸುತ್ತದೆ.

ಇಂತಹದೇ ವಿವರಣೆಯನ್ನು ಮುಂದೆ ಮಾಯವ್ವಳ ವ್ಯಕ್ತಿತ್ವದಲ್ಲಿ ಬೆರೆಸಿ ಹೇಳಲಾಗುತ್ತದೆ. ಕೂಸು ಬೀರಪ್ಪನನ್ನು ಅಡವಿಯಲ್ಲಿ ಕಂಚಿನಾಲದ ಮರಕ್ಕೆ ಕಟ್ಟಿಹಾಕಲಾಗಿರುತ್ತದೆ. ಕುರಿ ಕಾಯುತ್ತ ಅಕ್ಕನೊಂದಿಗೆ ಅಲ್ಲಿಗೆ ಬಂದ ಮಾಯವ್ವ ಗಿಡದಲ್ಲಿಯ ತೊಟ್ಟಿಲನ್ನು ಗಮನಿಸುತ್ತಾಳೆ, ತೊಟ್ಟಿಲನ್ನು ಅಕ್ಕತಂಗಿ ಪ್ರಯತ್ನಿಸಿ ಕೆಳಗೆ ಇಳಿಸುತ್ತಾರೆ. ಇಳಿಸಿದ ನಂತರ ಈ ಕೂಸು ಅಕ್ಕಳಿಗೆ ಸೇರಬೇಕೋ? ಅಥವಾ ತಂಗಿಗೆ ಸೇರಬೇಕೋ ಎಂಬ ಬಗ್ಗೆ ಜಿಜ್ಞಾಸೆ ನಡೆಯುತ್ತದೆ. ಅಲ್ಲಿಗೆ ಬಂದ ಹಿರಿಯನೊಬ್ಬ ಮಡಿಯಿಂದ ತೊಟ್ಟಿಲನ್ನು ಸುತ್ತಿದರೆ ಯಾರ ಎದಿಬದಿಗಳು ಚಿಗಿತು ನಿಲ್ಲುವವೋ ಅವರು ಕೂಸನ್ನು ಪಡೆಯುವುದು ಎಂದು ಸಲಹೆ ಕೊಡುತ್ತಾನೆ. ಅದಕ್ಕೆ ಸಹೋದರಿಯರಿಬ್ಬರೂ ಒಪ್ಪುತ್ತಾರೆ. ತಂಗಿ ಮಾಯವ್ವಳು ಮಡಿಯಿಂದ ತೊಟ್ಟಿಲಿನ ಸುತ್ತ ತಿರುಗಲು ಆಕೆಯ ಎದಿಬದಿಗಳು ಚಿಗಿತು ಬಾಣಂತಿಯ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ. ಆ ಮಾಯವ್ವ ಜನಕ್ಕೆ ಅಕ್ಕನಾಗಿ, ಮನಕ್ಕೆ ತಾಯಿಯಾಗಿ ಬೀರಪ್ಪನ ಸಂರಕ್ಷಣೆ ಮಾಡುತ್ತಾಳೆ.

ಕಾಲಾಂತರದಲ್ಲಿ ಕುರಿಗಳಿಂದ ದೊರಕುವ ಹಾಲು ಮಾನವನ ಬದುಕಿಗೆ ಮೂಲಾಧಾರ ಮತ್ತು ಪೂರ್ಣಾಹಾರ ಎಂಬುವುದನ್ನು ಅರಿತ ಮೇಲೆ ಪ್ರಾಣಿಗಳನ್ನು ಕೊಂದು ತಿನ್ನುವುದಕ್ಕಿಂತ ಅವುಗಳನ್ನು ಸಾಕಿ ಸಲುಹಿ, ಅವುಗಳಿಂದ ಪಡೆದ ಹಾಲಿನಿಂದ ದೊರಕುವ ನಾನಾ ವಿಧದ ಅನುಕೂಲತೆಯನ್ನು ಮನಗಂಡನು. ನಂತರ ಮಾನವನಲ್ಲಿ ಸಾಕಷ್ಟು ಮಾನವೀಯತೆಯ ಪರಿವರ್ತನೆಗಳಾದವು. ಹಾಲು ಮಾಂಸಾಹಾರಕ್ಕಿಂತ ಸಾವಿರ ಪಟ್ಟು ಉತ್ತಮ ಎಂಬ ಅಂಶ ಮಾನವನಿಗೆ ತಿಳಿದಾಗ ಹಾಲಿನ ಜನಕರಾದ ಇವರು ಹಾಲುಮತದವರು ಎಂದು ಕರೆಯಲ್ಪಟ್ಟರು.

ಇಂದು ಸಾಮಾನ್ಯವಾಗಿ ಕುರುಬರು ಮತ್ತು ಹಾಲುಮತದವರು ಅಭಿನ್ನರು ಎಂಬ ವಿಷಯ ಎಲ್ಲರಿಗೂ ತಿಳಿದ ಸಂಗತಿ. ಕುರಿ ಸಾಕುವವರನ್ನು ಕುರುಬರು. ದನಕಾಯುವವರನ್ನು ದನಗಾರರು ಗೋಪಾಲಕರನ್ನು ಗೊಲ್ಲರು. ಎಮ್ಮೆ ಸಾಕುವವರನ್ನು ಗೌಳಿಗರು ಎಂದೆಲ್ಲ ಬಗೆ ಬಗೆಯಾಗಿ ಇಂದು ಕರೆಯುತ್ತಿದ್ದರೂ ಇವರೆಲ್ಲರ ಮೂಲ ಉದ್ಯೋಗ ಹೈನುಗಾರಿಕೆಯೇ ಆಗಿದ್ದರಿಂದ ಇವರೆಲ್ಲರೂ ಹಾಲುಮತದವರೇ ಆಗಿದ್ದಾರೆ.

ಪ್ರಾರಂಭದಲ್ಲಿ ಈ ಎಲ್ಲ ತರಹದ ಪಶುಪಾಲಕರನ್ನು "ಕುರುಬರು" ಎಂಬ ಸಾಮಾನ್ಯ ಅರ್ಥದ ಅಡಿಯಲ್ಲಿ ನೋಡಲಾಗುತ್ತಿತ್ತು. ಎಲ್ಲ ಬಗೆಯ ಪಶುಪಾಲಕರ ಹೆಸರುಗಳು 'ಹಾಲುಮತ'ದವರ ಪರ್ಯಾಯ ನಾಮಗಳೇ ಆಗಿವೆಯೆಂದು ಹೇಳಬಹುದು. ಹೀಗೆ ಹಾಲುಮತದ ಪರಂಪರೆ ಬೆಳೆದಿವೆ.

**ಟಿಪ್ಪಣಿಗಳು**

೧. ಗರತಿಯರ ಹಾಡು : ಸಂಗ್ರಹ ಹಲಸಂಗಿ ಚೆನ್ನಮಲ್ಲಪ್ಪ ಮತ್ತು ಗೆಳೆಯರು. ಪು.೧೩೮ (ಪ್ರವರ್ಷ ೧೯೭೧)

೨. ಗರತಿಯರ ಹಾಡು : ಸಂಗ್ರಹ ಹಲಸಂಗಿ ಚೆನ್ನಮಲ್ಲಪ್ಪ ಮತ್ತು ಗೆಳೆಯರು. ಪು.೧೩೮ (ಪ್ರವರ್ಷ ೧೯೭೧)

೩. ಗರತಿಯರ ಹಾಡು : ಸಂಗ್ರಹ ಹಲಸಂಗಿ ಚೆನ್ನಮಲ್ಲಪ್ಪ ಮತ್ತು ಗೆಳೆಯರು. ಪು.೧೩೮ (ಪ್ರವರ್ಷ ೧೯೭೧)

೪. ಕುರುಬರ ಹೆಜ್ಜೆಗಳು ಒಂದು ಅಧ್ಯಯನ ಲೇ ಚಂದ್ರಕಾಂತ ಬಿಜ್ಜರಗಿ ಪು.೧೧ ಪ್ರಕಟಣೆ - ೨೦೦೬

೫. ಕುರುಬ ಜನಾಂಗದ ಪ್ರಾಚೀನತೆ ಮತ್ತು ಆಧುನಿಕತೆ : ಡಾ. ಮಾದೇಗೌಡ (ಪುಟ ೫)

೬. ಅದೇ, ಪುಟ.೬

೭. ಅದೇ, ಪುಟ.೭, ೮

೮. ಅದೇ, ಪುಟ. ೯

೯. ಬೀರಲಿಂಗೇಶ್ವರ ಪುರಾಣದ ಮುನ್ನುಡಿಯ ಸಾರಾಂಶ ಲೇ ಜುಮ್ಮಣ್ಣ ಜುಮ್ಮಣ್ಣವರ ಪು. ೧೨

* * *

# ಅಧ್ಯಾಯ ಮೂರು

## ಇಂಡಿ ತಾಲೂಕಿನ ಹಾಲುಮತ ದೈವಗಳು

# ಅಧ್ಯಾಯ ಮೂರು

## ಇಂಡಿ ತಾಲೂಕಿನ ಹಾಲುಮತ ದೈವಗಳು

**ಇಂಡಿ ತಾಲೂಕು: ಭೌಗೋಳಿಕ ಹಿನ್ನೆಲೆ**

ಇಂಡಿಯು ಹುಬ್ಬಳ್ಳಿ ಸೋಲ್ಲಾಪೂರ ರೈಲು ಮಾರ್ಗದ ಇಂಡಿ ರೋಡ ನಿಲ್ದಾಣದಿಂದ ಆಗ್ನೇಯಕ್ಕೆ ೫ ಕಿ.ಮೀ. ದೂರದಲ್ಲಿರುವ ತಾಲೂಕು ಮತ್ತು ಕಂದಾಯ ಉಪವಿಭಾಗದ ಕೇಂದ್ರಸ್ಥಾನವಾಗಿದೆ. ಪ್ರಸಿದ್ಧ ಭೂಗೋಳ ಶಾಸ್ತ್ರಜ್ಞ ಟಾಲೆಮಿಯು ಕ್ರಿ.ಶ. ಎರಡನೇಯ ಶತಮಾನದಲ್ಲಿ (ಕ್ರಿ.ಶ.೧೫೦) ರಚಿಸಿರುವ ''ಎ ಗೈಡ್ ಟು ದ ಜಿಯಾಗ್ರಫಿ''[೧] ಎಂಬ ಗ್ರಂಥದಲ್ಲಿ ಹೆಸರಿಸಿರುವ ಕರ್ನಾಟಕದ ಊರುಗಳಲ್ಲಿ ಇಂಡಿಯನ್ನು ಗುರುತಿಸಲಾಗಿದೆ. ಶಾಸನಗಳಲ್ಲಿ ಈ ಊರನ್ನು ಚಿಕ್ಕ ಇಂಡಿ ಎಂದು ಕರೆಯಲಾಗಿದೆ.[೨] ಭೀಮ ಮಹಾತ್ಮೆ ಪುರಾಣದಲ್ಲಿ ಈ ಗ್ರಾಮವನ್ನು ಪಯಕ್ಷೇತ್ರ (ಹಾಲಿನ ಕ್ಷೇತ್ರ) ಎಂದು ಉಲ್ಲೇಖಿಸಲಾಗಿದೆ. ಭೀಮಾ ತೀರಕ್ಕೆ ಸಮೀಪವಿರುವ ಈ ಪ್ರದೇಶವು ಫಲವತ್ತಾಗಿದ್ದು ಹೂ ಹಣ್ಣುಗಳ ಬೆಳೆಗಳಿಗೆ ಜನಪ್ರಿಯವಾಗಿದೆ. ಮತ್ತು ಹೈನುಗಾರಿಕೆಗೂ ಇಂಡಿಯು ಪ್ರಸಿದ್ದವಾಗಿದ್ದು ''ಪಯಕ್ಷೇತ್ರ'' ಎಂಬ ಹೆಸರು ಪಡೆದಿರುವುದೆಂಬ ಸ್ಪಷ್ಟ ಅಭಿಪ್ರಾಯವಾಗಿದೆ. ಯಾದವ ಜೈತುಗಿಯು ಕ್ರಿ.ಶ. ೧೧೯೬ರ ಶಾಸನದಲ್ಲಿ ''ಹರಗ್ರಹದಿಂ ಸುರಗೃಹದಿಂ ಅರುಹ ಗ್ರಹದೆ ಚಾದ್ವಾಲಯಂ ಗೊರವರ ಸವಣರ, ಬೌದ್ಧರ, ನೆರವಿಗಳಿಂದ ಇಂಡಿವೇಡೆ ಸೊಗೆಯಿಸಿ ತೋರ್ಕುಂ'' ಎಂದು ಅದು ಚತುಸ್ನೇಹಮಯಗಳ ಬೀಡಾಗಿದುದ್ದನ್ನು ವರ್ಣಿಸಲಾಗಿದೆ. ಪ್ರಸ್ತುತ ಬೌದ್ಧ ಧರ್ಮದ ಅವಶೇಷಗಳನ್ನು ಹೊರತು ಪಡಿಸಿ ಶೈವ, ವೈಷ್ಣವ ಹಾಗೂ ಜೈನ ದೇವಾಲಯಗಳ ಅವಶೇಷಗಳೊಂದಿಗೆ ಆಯಾ ಜನ ಸಮುದಾಯದ ಹಾಲುಮತ ದೇವಾಲಯಗಳು ಉಳಿದು ಬಂದಿವೆ. ತಡಲಗಿಯ ಹಿರೇಮಠದಲ್ಲಿರುವ ಕ್ರಿ.ಶ. ೧೫ನೇ ಶತಮಾನದ ಶಾಸನದಲ್ಲಿ ಇಂಡಿಯಲ್ಲಿ ೫೦ ಎಕರೆ ಭೂಮಿಯನ್ನು ದಾನ ನೀಡಿದ ಬಗೆಗೆ ಉಲ್ಲೇಖಿಸಲಾಗಿದೆ.[೩]

ಈ ಗ್ರಾಮದಲ್ಲಿ ಶಾಂತೇಶ್ವರ ಮತ್ತು ಆದಿನಾಥ ತೀರ್ಥಂಕರ ಮಂದಿರಗಳು ಜೀರ್ಣೋದ್ಧಾರಗೊಂಡು ಸುಸ್ಥಿತಿಯಲ್ಲಿವೆ. ಇಲ್ಲಿರುವ ಆದಿನಾಥ ಜೈನ ಬಸದಿಯು ಮೂಲತಃ ಕಲ್ಯಾಣ ಚಾಲುಕ್ಯರ ಕಾಲದ್ದಾಗಿದ್ದು ಈಗ ಸಂಪೂರ್ಣವಾಗಿ ದುರಸ್ತಿಗೊಂಡಿರುವುದು ವ್ಯಕ್ತವಾಗುತ್ತದೆ. ಗರ್ಭಗೃಹದಲ್ಲಿರುವ ಪ್ರಾಚೀನವಾದ ಪಾಣಿ ಪೀಠದ ಮೇಲೆ ಧ್ಯಾನಾಸಕ್ತನಾಗಿ ಆಸೀನನಾಗಿರುವ ಆದಿನಾಥ ತೀರ್ಥಂಕರನ ಚಾಲುಕ್ಯ ಶೈಲಿಯ ಶಿಲಾಮೂರ್ತಿಯಿದೆ. ಈ ತೀರ್ಥಂಕರನ ಹಿಂಭಾಗವಲ್ಲಿ ದೊಡ್ಡದಾದ ಪ್ರಭಾವಳಿಯಿದ್ದು ಸುತ್ತಲೂ ೨೪ ತೀರ್ಥಂಕರುಗಳ ಕಿರು

ಶಿಲ್ಪಗಳನ್ನು ಕೆತ್ತಲಾಗಿದೆ. ಆದಿನಾಥನ ಎಡಭಾಗದಲ್ಲಿ ಶಾಂತಿನಾಥ ತೀರ್ಥಂಕರರ ಇತ್ತೀಚಿನ ಮೂರ್ತಿಯದ್ದು ಪೀಠದ ಮೇಲೆ ನಾಗರಿ ಶಾಸನವಿದೆ. ಇದರ ಬಲಭಾಗದಲ್ಲಿ ಮಹಾವೀರರ ರಾಜಾಸ್ತಾನೀ ಶೈಲಿಯ ಕಪ್ಪು ಶಿಲೆಯ ಇತ್ತೀಚಿನ ಶಿಲಾಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಮುಂಭಾಗದ ಮಂಟಪದಲ್ಲಿ ಕಲ್ಯಾಣ ಚಾಲುಕ್ಯರ ಲಕ್ಷಣವುಳ್ಳ ಎರಡು ಸ್ತಂಭದ ಭಾಗಗಳನ್ನು ದುರಸ್ತಿಯ ಸಮಯದಲ್ಲಿ ಉಪಯೋಗಿಸಲಾಗಿದೆ. ಊರಿನಲ್ಲಿ ಇತ್ತೀಚೆಗೆ ನಿರ್ಮಿಸಲಾಗಿರುವ ರತ್ನತ್ರಯ ದಿಗಂಬರ ಬಸದಿಯಿದ್ದು ಅದರಲ್ಲಿ ಆದಿನಾಥ, ಶಾಂತಿನಾಥ ಹಾಗೂ ಮಹಾವೀರರ ಶಿಲಾಮೂರ್ತಿಗಳನ್ನು ಪ್ರತಿಷ್ಠಾಪಿಸಲಾಗಿದೆ.[೪]

ಶಾಂತೇಶ್ವರ ದೇವಾಲಯದಲ್ಲಿ ವಿಶೇಷ ಸಂದರ್ಭದಲ್ಲಿ ಅಕ್ಕಿಪೂಜೆ ನಡೆಯುತ್ತದೆ. ಇದು ಬೇರೆ ಎಲ್ಲಿಯೂ ಕಾಣಸಿಗದ ವಿಶಿಷ್ಟ ಪೂಜೆಯಾಗಿದೆ. ಗರ್ಭಗೃಹದಲ್ಲಿರುವ ಎತ್ತರವಾದ ಲಿಂಗದ ಮೇಲೆ ಪೂರ್ಣ ಕುಂಭಾಕೃತಿಯಿಂದ ಆರಂಭವಾಗಿ ಶಂಕಾಕೃತಿಯಲ್ಲಿ ಮುಗಿಯುವ ಈ ಪೂಜೆಗೆ ಸುಮಾರು ಮೂರು ಕ್ವಿಂಟಾಲ್ ಅಕ್ಕಿಯನ್ನು ಉಪಯೋಗಿಸಲಾಗುತ್ತದೆ. ಇದರಲ್ಲಿ ಅಕ್ಕಿಯನ್ನು ನೀರಿನಲ್ಲಿ ಅದ್ದಿ ಲಿಂಗದ ಮೇಲೆ ಲೇಪಿಸುತ್ತಾ ನೂಲಿನ ದಾರದಿಂದ ಸುತ್ತುವಾಗ ಹೂ ಮತ್ತು ನಿಂಬೆ ಹಣ್ಣುಗಳನ್ನು ಮಧ್ಯದಲ್ಲಿಟ್ಟು ಅಲಂಕರಿಸುತ್ತಾರೆ. ಇದು ಶಿವಲಿಂಗದ ಆಕರ್ಷಕ ನೋಟಕ್ಕೆ ಕಾರಣವಾಗುತ್ತದೆ. ಸಂಪ್ರದಾಯಿಕ ನಂಬಿಕೆಯ ಪ್ರಕಾರ ಮಾರನೆಯ ದಿನ ಲಿಂಗದ ಮೇಲಿನ ನೂಲನ್ನು ಬಿಚ್ಚಿದಾಗ ಅಕ್ಕಿ ಅನ್ನವಾಗಿರುತ್ತದೆಂದು ಹೇಳಲಾಗುತ್ತದೆ.[೫]

ಪ್ರತಿವರ್ಷ ಮಾರ್ಗಶಿರ ಶುದ್ಧ ಚಂಪಾಷಷ್ಠಿ ನಂತರದ ಸೋಮವಾರದಂದು ಮೂರು ದಿನಗಳವರೆಗೆ ಬೃಹತ್ ಪ್ರಮಾಣದಲ್ಲಿ ಜಾತ್ರೆಯು ನಡೆಯುತ್ತದೆ ಜಾತ್ರೆಯಲ್ಲಿ ಕಲಾ ಮೇಳಗಳೊಂದಿಗೆ ಬಾಸಿಂಗ ಮತ್ತು ನಂದಿ ಧ್ವಜಗಳ ಮೆರವಣಿಗೆಗಳು ಜರುಗುತ್ತವೆ. ಮೂಲತಃ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿದ್ದು. ಈಗ ಸಂಪೂರ್ಣವಾಗಿ ದುರಸ್ತಿಗೊಂಡಿರುವ ಈ ದೇವಾಲಯವು ವಿಶಾಲವಾದ ಒಳ ಪ್ರಕಾರವನ್ನು ಹೊಂದಿದೆ. ಈಗ ಪಕ್ಕದಲ್ಲಿ ನಿರ್ಮಾಣವಾಗುತ್ತಿರುವ ಕಲ್ಯಾಣ ಮಂಟಪಕ್ಕೆ ಪಾಯ ತೋಡುವಾಗ ಚಾಲುಕ್ಯ ಶೈಲಿಯ ಹಲವು ಶಿಲ್ಪ ಅವಶೇಷಗಳಾದ ಮಹಿಷಮರ್ಧಿನಿ-ಲಿಂಗಪೀಠ ಎರಡು ನಾರಾಯಣನ ಮೂರ್ತಿಗಳು, ಸೂರ್ಯ, ಕಾಳಭೈರವ, ನಾಗ, ನಾಗಿಣಿ, ಗಣೇಶ ಅನೇಕ ಶಿಲಾಮೂರ್ತಿಗಳು ಲಭಿಸಿದ್ದು ಅವುಗಳನ್ನು ಇಂದು ದೇವಾಲಯದಲ್ಲಿ ಸುರಕ್ಷಿಸಿಡಲಾಗಿದೆ.[೬]

ಶರಣ ಶಾಂತೇಶ್ವರನ ವರಪ್ರಸಾದವನ್ನು ಗಳಿಸಿದವರೆಂದು ಹೇಳಲಾಗುವ ಇಲ್ಲಿಯ ಮಹ್ಮದೀಯ ಮಂಜಲೇ ಖಾನೇ ಪೀರರ ಜಾತ್ರೆಯೂ ಇದೇ ಜಾತ್ರೆಯ ದಿನವೇ ಆಗುತ್ತದೆ. ಇದು ಹಿಂದೂ ಮುಸ್ಲಿಂ ಸಾಮರಸ್ಯದ ದ್ಯೋತಕವೂ ಆಗಿದೆ. ಊರಿನಲ್ಲಿರುವ ಹುಸೇನ್ ಭಾಷಾ ದರ್ಗಾಕ್ಕೂ ಜನ ಗೌರವದಿಂದ ನಡೆದುಕೊಳ್ಳುತ್ತಾರೆ. ಇಂಡಿಯ ಮೊಹರಂ ತುಂಬಾ ಪ್ರಸಿದ್ಧವಾದದ್ದು. ಇಲ್ಲಿನ ರಾಮಪೀಠದಲ್ಲಿ ಭಜನೆ, ಕೀರ್ತನೆಗಳು ನಡೆಯುತ್ತವೆ. ಇಂಡಿಯಿಂದ ದಕ್ಷಿಣಕ್ಕೆ ಎರಡು ಕಿ.ಮೀ. ಅಂತರದಲ್ಲಿ ಹಾಳುಬಿದ್ದ ಹಿರಿಯಿಂಡಿ ಇದೆ. ಇಲ್ಲಿರುವ ಹನುಮಂತ ದೇವಾಲಯ ಪ್ರಸಿದ್ಧವಾಗಿದೆ.[೬] ಇಂಡಿ ತಾಲೂಕಿನ ಸರಹದ್ದಿನಲ್ಲಿ ಪ್ರಮುಖವಾದ ಭೀಮಾನದಿಯು ಹರಿದು ಹೋಗುತ್ತದೆ. ಭೀಮಾನದಿಯು ಪಶ್ಚಿಮ ಘಟ್ಟಗಳ ಭೀಮಾಶಂಕರ (ಮಹಾರಾಷ್ಟ್ರ)ದಲ್ಲಿ ಹುಟ್ಟುತ್ತದೆ.

ಮಹಾರಾಷ್ಟ್ರ ರಾಜ್ಯದ ಪುಣೆ ಮತ್ತು ಸೋಲಾಪೂರ ಜಿಲ್ಲೆಗಳಲ್ಲಿ ಹರಿದು ಬರುವ ಈ ನದಿಯು ವಿಜಾಪೂರ ಜಿಲ್ಲೆಯ ಉತ್ತರ ತುದಿಯಲ್ಲಿರುವ ಇಂಡಿ ತಾಲೂಕಿನ ದಸೂರಿನ ಬಳಿ ಕರ್ನಾಟಕವನ್ನು ಪ್ರವೇಶಿಸುತ್ತದೆ. ಅಲ್ಲಿಂದ ಪೂರ್ವಾಭಿಮುಖವಾಗಿ ಹರಿದು ಅಂಕು ಡೊಂಕುಗಳ ಹರಿವಿನೊಡನೆ ಇಂಡಿ ತಾಲೂಕಿನ ಅಗರಖೇಡ ಭೂಯ್ಯಾರದಿಂದ ಸಿಂದಗಿ ತಾಲೂಕನ್ನು ಪ್ರವೇಶಿಸುತ್ತದೆ.[೮]

ಇಂಡಿ ತಾಲೂಕಿನಲ್ಲಿ ಉತ್ತರದಲ್ಲಿ ಬೋರಿಹಳ್ಳವು ರೋಡಗಿ, ಲಾಳಸಂಗಿ ಗ್ರಾಮದ ಹತ್ತಿರ ಭೀಮಾನದಿಯನ್ನು ಸೇರುತ್ತದೆ. ಇಂಡಿ ತಾಲೂಕಿನ ಅಗರಖೇಡ ಚಿಕ್ಕಮಣೂರ, ಧೂಳಖೇಡ, ಮಿರಗಿಯ ಹತ್ತಿರ ಅನೇಕ ಹಳ್ಳಿಗಳು ನದಿಗೆ ಕೂಡಿದ ಸ್ಥಳಗಳಲ್ಲಿ ಪ್ರಸಿದ್ಧ ತೀರ್ಥಕ್ಷೇತ್ರಗಳಿವೆ. ವಿಶೇಷವಾಗಿ ಈ ಸ್ಥಳಗಳಲ್ಲಿ ಮಲ್ಲಿಕಾರ್ಜುನನ ದೇವಸ್ಥಾನಗಳು ಕಂಡುಬರುತ್ತವೆ.[೯] ಹೀಗೆ ಕರ್ನಾಟಕದಲ್ಲಿನ ಬಿಜಾಪೂರ ಜಿಲ್ಲೆಯ ಇಂಡಿ ತಾಲೂಕಿನಲ್ಲಿ ಹಲವಾರು ಜನ ಸತ್ಪುರುಷರು ದೇಶ ಸಂಚಾರ ಮಾಡುತ್ತಾ ಬಂದು ಹೋಗಿದ್ದಾರೆ. ಒಂದು ಕಾಲಕ್ಕೆ ಈ ನೆಲ ತಪಸ್ಸಿನ ತಾಣವಾಗಿತ್ತು. ಇಂದಿಗೂ ಸಹ ಇಂತಹ ಶರಣರು ಮಹಿಮಾ ಪುರುಷರು ಹಲವು ಗ್ರಾಮಗಳಲ್ಲಿ ಬಂದು ಹೋಗಿದ್ದರ ಕುರುಹಿನ ಮೇಲೆ ಹಾಲುಮತ ದೇವಸ್ಥಾನಗಳು ಜನಪದ ಸಂಸ್ಕೃತಿಯ ಒಂದು ಅವಿಭಾಜ್ಯ ಅಂಗವಾಗಿದೆ. ಈ ಎಲ್ಲಾ ವಿಷಯಗಳ ಬಗ್ಗೆ ಅಧ್ಯಯನ ಮಾಡುವುದೇ ಈ ಪ್ರಬಂಧದ ಮುಖ್ಯ ಉದ್ದೇಶವಾಗಿದೆ.

**ಟಿಪ್ಪಣಿಗಳು**

೧. ಬಿಜಾಪೂರ ಜಿಲ್ಲಾ ಗೆಝೆಟಿಯರ್ ಸಂ. ಆರ್. ಮುನಿಸ್ವಾಮಿ, ಪ್ರಕಟಣೆ, ೧೯೯೯, ಪು. ೪೬

೨. ಕರ್ನಾಟಕ ಜನಪದ ಕಲೆಗಳ ಕೋಶ ಲೇ. ಹಿ.ಚಿ. ಬೋರಲಿಂಗಯ್ಯ ಪು.೧೦೪೧

೩. ಕರ್ನಾಟಕ ಜನಪದ ಕಲೆಗಳ ಕೋಶ ಲೇ. ಹಿ.ಚಿ. ಬೋರಲಿಂಗಯ್ಯ ಪು.೧೦೪೧

೪. ಕರ್ನಾಟಕ ಜನಪದ ಕಲೆಗಳ ಕೋಶ ಲೇ. ಹಿ.ಚಿ. ಬೋರಲಿಂಗಯ್ಯ ಪು.೧೦೪೨

೫. ಕರ್ನಾಟಕ ಜನಪದ ಕಲೆಗಳ ಕೋಶ ಲೇ. ಹಿ.ಚಿ. ಬೋರಲಿಂಗಯ್ಯ ಪು.೧೦೪೨

೬. ಕರ್ನಾಟಕ ಜನಪದ ಕಲೆಗಳ ಕೋಶ ಲೇ. ಹಿ.ಚಿ. ಬೋರಲಿಂಗಯ್ಯ ಪು.೧೦೪೨

೭. ಕರ್ನಾಟಕ ಜನಪದ ಕಲೆಗಳ ಕೋಶ ಲೇ. ಹಿ.ಚಿ. ಬೋರಲಿಂಗಯ್ಯ ಪು.೧೦೪೨

೮. ವಿಜಾಪುರ ಜಿಲ್ಲಾ ಗೆಝೆಟಿಯರ್ ಸಂ. ಆರ್ ಮುನಿಸ್ವಾಮಿ, ಪುಟ ೨೪

೯. ವಿಜಾಪುರ ಜಿಲ್ಲಾ ಗೆಝೆಟಿಯರ್ ಸಂ. ಆರ್ ಮುನಿಸ್ವಾಮಿ, ಪುಟ ೨೫

## ೩.೧. ರೇವಣ ಸಿದ್ಧೇಶ್ವರ

ರೇವಣಸಿದ್ಧರನ್ನು ಪ್ರಾಚೀನ ಕಾಲದಿಂದಲೂ ಹಾಲುಮತ ಜನಾಂಗದವರು ತಮ್ಮ ಮೂಲ ಗುರುಗಳೆಂದು ಪೂಜಿಸಿಕೊಂಡು ಬಂದಿದ್ದಾರೆ. ಇವರು ಹಾಲುಮತ ಸಮಾಜದ ಮಹಾಪುರುಷರಲ್ಲಿ ಅಗ್ರಸ್ಥಾನವನ್ನು ಪಡೆದಿದ್ದಾರೆ. ಕರ್ನಾಟಕದ ಸಾಮಾಜಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ತಮ್ಮನ್ನು ಗುರುತಿಸಿಕೊಂಡು ಇವರು ಲಿಂಗಾಯತ ಮತ್ತು ಹಾಲುಮತ ಜನಾಂಗದ ಸಮಾಜಗಳೆರಡಕ್ಕೂ ಸೇತುವೆಯಾಗಿದ್ದಾರೆ. ಆದ್ದರಿಂದ ಈ ಎರಡೂ ಜನಾಂಗದವರು ರೆವಣಸಿದ್ಧರನ್ನು ಪೂಜಿಸುತ್ತಿರುವುದನ್ನು ನಾವು ಕಾಣಬಹುದು. ಈತನನ್ನು ಕುರಿತು ಲಿಖಿತ ಮತ್ತು ಮೌಖಿಕ ಸಾಹಿತ್ಯದಲ್ಲಿಯೂ ಸಾಕಷ್ಟು ಪ್ರಮಾಣದಲ್ಲಿ ಉಲ್ಲೇಖವಾಗಿರುವುದನ್ನು ಕಾಣಬಹುದು. ಅವುಗಳಲ್ಲಿ ಪ್ರಮುಖವಾದವುಗಳೆಂದರೆ, ಹಾಡುಗಳು ಶಾಸನಗಳು, ಕಾವ್ಯ ಪುರಾಣಗಳಿಂದ ಈತನ ಬಗ್ಗೆ ತಿಳಿದುಕೊಳ್ಳಬಹುದಾಗಿದೆ. ಈ ರೇವಣಸಿದ್ದೇಶ್ವರನನ್ನು ಕುರಿತು ಮೊಟ್ಟಮೊದಲ ಬಾರಿಗೆ ಕಾವ್ಯವನ್ನು ಬರೆದಂತಹವನು ಮಹಾಕವಿ ಹರಿಹರ, ಈತನ ''ರೇವಣಸಿದ್ಧೇಶ್ವರ ರಗಳೆ''ಯಲ್ಲಿ ರೇವಣಸಿದ್ಧರ ಜನಪದ ಪ್ರಸಂಗವನ್ನು ಪೌರಾಣಿಕ ಹಿನ್ನೆಲೆಯಲ್ಲಿಟ್ಟುಕೊಂಡು ಅಭಿವ್ಯಕ್ತಪಡಿಸಿದ್ದಾನೆ.

''ರಜತಗಿರಿಯ ಶಿವನ ಸಭೆಯಲ್ಲಿ ನಂದೀಶ, ವೀರಭದ್ರ, ದಾರುಕ ರೇಣುಕ, ಅನೇಕ ದೇವಾನುದೇವತೆಗಳು ಕುಳಿತುಕೊಂಡಿರುವಾಗ, ರೇಣುಕನ ಮುಖವನ್ನು ನೋಡಿ ಶಿವನು ತಾಂಬೂಲವನ್ನು ತಂದುಕೊಡು ಎನ್ನುತ್ತಾನೆ. ರೇಣುಕನು ತಾಬೂಲವನ್ನು ತೆಗೆದುಕೊಂಡು ಬರುವಾಗ ದಾರುಕನೆಂಬುವವನನ್ನು ದಾಟಿದ ಪರಿಣಾಮದಿಂದ ನಿನಗೆ ನರಜನ್ಮ ಪ್ರಾಪ್ತವಾಯಿತೆಂದು ಶಿವನು ಶಾಪವನ್ನು ಕೊಡುತ್ತಾನೆ. ಆಗ ರೇಣುಕನು ಭಯದಿಂದ ಕೈಮುಗಿದು ನನ್ನ ತಪ್ಪನ್ನು ಮನ್ನಿಸಿ ವಿಶಾಪವನ್ನು ಕರುಣಿಸೆಂದು ಬೇಡಿಕೊಳ್ಳುತ್ತಾನೆ. ಆಗ ಶಿವನು ಕರುಣೆಗೊಂಡು ಭೂಲೋಕದಲ್ಲಿ ಸೋಮೆಶ್ವರ ಲಿಂಗದಲ್ಲಿ ಹುಟ್ಟಿ ಸುಖ-ದುಃಖಗಳನ್ನು ಅನುಭವಿಸಿ ಬರಬೇಕೆನ್ನುತ್ತಾನೆ. ಅದೇ ರೀತಿಯಾಗಿ ಕೊಲ್ಲಿಪಾಕಿ ಸೋಮೇಶ್ವರ ಲಿಂಗದಲ್ಲಿ ರೇಣುಕನು ಹುಟ್ಟುತ್ತಾನೆ.[೨]

ಕೊಲ್ಲಿಪಾಕಿ ಸೋಮನಾಥ ಲಿಂಗದಲ್ಲಿ ರೇವಣಸಿದ್ದೇಶ್ವರರು ಹುಟ್ಟಿದರು ಎಂಬ ಕವಿಗಳು ಮತ್ತು ಪುರಾಣಕರ್ತರ ಅಭಿಪ್ರಾಯವನ್ನು ಒಪ್ಪದೇ ಇವರು ಕುರುಬ ಮೂಲದಿಂದ ಹುಟ್ಟಿದ್ದಾರೆ ಎಂಬುದು ಜನರ ಮಾತಾಗಿದೆ. ಹೀಗೆ ಹಾಲುಮತ ಜನಾಂಗದಲ್ಲಿ ಬರುವಂತಹ ಮುದ್ದುಗೊಂಡ ಮತ್ತು ಮುದ್ದವ್ವ ದಂಪತಿಗಳಿಗೆ ಏಳು ಜನ ಮಕ್ಕಳು.

೧. ಆದಿಗೊಂಡ
೨. ಅನಾದಿಗೊಂಡ
೩. ಲಕ್ಕಪ್ಪಗೊಂಡ
೪. ಖ್ಯಾಮಗೊಂಡ
೫. ನೇಮಗೊಂಡ
೬. ದ್ಯಾಮಗೊಂಡ
೭. ಪದ್ಮಗೊಂಡ

೧. ಆದಿಗೊಂಡ ಮತ್ತು ನಿಂಗಮ್ಮ ದಂಪತಿಗಳಿಗೆ

೧. ಅಮರಗೊಂಡ

೨. ತುಮರಗೊಂಡ

೩. ವೀರಗೊಂಡ

೪. ಮಹಾರಾಯಗೊಂಡ

೫. ಶಿವಗೊಂಡ

೬. ಶಿವಪದ್ಮಗೊಂಡ

೨. ಅನಾದಿಗೊಂಡ ಮತ್ತು ಬಸಮ್ಮ ದಂಪತಿಗಳಿಗೆ

೧. ಅಚಗೊಂಡ

೨. ಮಾಚಗೊಂಡ

೩. ಲಕ್ಕೊಂಡ ಮತ್ತು ಶಚಿದೇವಿ ದಂಪತಿಗಳಿಗೆ ಮಕ್ಕಳಿರಲಿಲ್ಲ

೪. ಖ್ಯಾಮಗೊಂಡ ಮತ್ತು ಮಹಾತಾಯವ್ವನಿಗೆ

೧. ಗುರುನಾಥ

೨. ಆದಿನಾಥ

೩. ಯಮನವ್ವ

೪. ಈಶ್ವರಪ್ಪ

೫. ಸತ್ಯವತಿ

೫. ದ್ಯಾಮಗೊಂಡನ ಹೆಂಡತಿಯ ಹೆಸರು ಯಾವುದೇ ಲೇಖನದಲ್ಲಿ ಉಲ್ಲೇಖಗೊಂಡಿಲ್ಲ ಇವನಿಗೆ ಹನ್ನೊಂದು ಜನ ಮಕ್ಕಳಿದ್ದರು.

೧. ಸಿದ್ಧಯ್ಯ

೨. ಜೋಗಯ್ಯ

೩. ಅಂಡಿತಯ್ಯ

೪. ಅಮೃತಯ್ಯ

೫. ಅರ್ಥಯ್ಯ

೬. ರಾಮಪ್ಪ

೭. ಸಿದ್ಧಮ್ಮ

೮. ಭೂತಯ್ಯ

೯. ವೇತಾಳಯ್ಯ

೧೦. ಕಾಡಸಿದ್ಧ

೧೧. ಸಂಕಯ್ಯ

೬. ನೇಮಗೊಂಡನ ಹೆಂಡತಿಯ ಹೆಸರು ಕೂಡಾ ತಿಳಿದು ಬಂದಿಲ್ಲ. ಇವನಿಗೆ ಮೂರು ಜನ ಮಕ್ಕಳಿದ್ದರು.

೧. ಕಾಳಗೊಂಡ

೨. ಭಯರಗೊಂಡ

೩. ಪದ್ಮಾವತಿ.

೭. ಪದ್ಮಗೊಂಡ ಮತ್ತು ಜಂಕಾದೆವಿಗೆ ನಾಲ್ಕು ಜನ ಮಕ್ಕಳಿದ್ದರು.

೧. ಜಗ್ಗಲಿ ಮುತ್ತಯ್ಯ

೨. ಸಹಾಯ ಮುತ್ತಯ್ಯ

೩. ಸೋಹ ಮುತ್ತಯ್ಯ

೪. ಶಾಂತಮಯ ಮುತ್ತಯ್ಯ

೮. ಪದ್ಮಾವತಿ ಮತ್ತು ಸುಚಿಲಾದೇವಿಗೆ

೧. ದೇವರಾಜ

ಇನ್ನುಳಿದ ಪತ್ನಿಯರಾದ ಹರಣಾದೇವಿ, ಸಿದ್ಧಾದೇವಿ, ಚೆನ್ನಮ್ಮದೇವಿ ಹೀಗೆ ಪದ್ಮಗೊಂಡನಿಗೆ ಒಟ್ಟು ಐದು ಜನ ಪತ್ನಿಯರಿಗೆ ೮೪ ಜನ ಮಕ್ಕಳಿದ್ದರು. ಹೀಗಾಗಿ ಇವನನ್ನು ''ಉಂಡಾಡ ಪದ್ಮಣ್ಣ'' ಎಂಬ ಹೆಸರು ರೂಢಿಯಲ್ಲಿತ್ತು. ಪದ್ಮಗೊಂಡನ ನಾಲ್ಕನೇಯ ಮಗ ಶಾಂತಮಯ ಮುತ್ತಯ್ಯನೇ ಈ ರೇವಣ ಸಿದ್ಧನ ತಂದೆಯಾಗಿದ್ದನು.[೪]

ರೇವಣಸಿದ್ಧರು ಕುರುಬರ ಮತ್ತು ಗೊಂಡರ ಮೂಲಗುರು ಮತ್ತು ಮೂಲ ಪುರುಷ ಎಂದು ವೀರಶೈವ ಪಂಚಾಚಾರ್ಯರ ಚರಿತ್ರೆಯ ಪ್ರಥಮ ಸಂಪುಟದಲ್ಲಿ ''ಶ್ರೀ ರೇವಣಸಿದ್ದೇಶ್ವರರು'' ಎಂಬ ಲೇಖನದಲ್ಲಿ ವ್ಯಕ್ತವಾಗಿದೆ. ಕೃಷ್ಣಮೂರ್ತಿ ಕರ್ಪೂರ ಅವರ ಸಂಪಾದನೆಯ ದಕ್ಷಿಣ ಕಾಶಿ ಮೈಲಾರ ಕೃತಿಯಲ್ಲಿ ಆದಿಗೊಂಡ ಮತ್ತು ರೇವಣಸಿದ್ಧರು ಬೇರೆಯಲ್ಲ, ರೇವಣಸಿದ್ಧರೇ ಮಲ್ಲಯ್ಯ ಮಲ್ಹಾರಿ ಅವತಾರವನ್ನು ತಳೆದಿರಬೇಕೆಂದು ಶ್ರೀ ಚನ್ನಮಲ್ಲಿಕಾರ್ಜುನರು ಒಂದೆಡೆ ಹೇಳುತ್ತಾರೆ.[೫]

ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನಿಂದ ಪಶ್ಚಿಮ ದಿಕ್ಕಿಗೆ ೧೫ ಕಿ.ಮಿ. ದೂರದಲ್ಲಿ ''ಸರೂರ'' ಎಂಬ ಗ್ರಾಮದ ಶಾಂತಮಯ ಮುತ್ತ್ಯಯ್ಯ ಶಿವಯೋಗಿಯಾಗಿದ್ದರೂ ಸಂಸಾರಿಯಾಗಿ ತನ್ನ ಪತ್ನಿ ಮಹಾದೇವಿ ಮತ್ತು ಗುರುಭಕ್ತರೊಡನೆ ಸಂಚಾರಿಯಾಗಿದ್ದ ಸಮಯದಲ್ಲಿ ಇಂದಿನ ಆಂಧ್ರಪ್ರದೇಶ ರಾಜ್ಯದ ನೆಲ್ಗೊಂಡ ಜಿಲ್ಲೆಯ ಭುವನಗಿರಿ ತಾಲೂಕಿನ ''ಕೊಲ್ಲಿಪಾಕಿ'' ಗ್ರಾಮದಲ್ಲಿ ಕೆಲವು ಸಮಯ ವಾಸವಾಗಿದ್ದ ಸಮಯದಲ್ಲಿ ರೇವಣಸಿದ್ಧರು ಜನಿಸಿದ್ದರು. ಯಾವುದೋ ಒಂದು ಸಂದರ್ಭದಲ್ಲಿ ಚಿಕ್ಕ ವಯಸ್ಸಿನಲ್ಲಿಯೇ ತಂದೆ-ತಾಯಿಗಳನ್ನು ಕಳೆದುಕೊಂಡಿದ್ದ ಇವನನ್ನು ನಾಥಪಂಥೀಯ ಸಾಧುಗಳು ಸಾಕಿದರೆಂದು ''ನವನಾಥ ಚರಿತ್ರೆ''ಯಿಂದ ತಿಳಿದುಬರುತ್ತದೆ. ಇವರ ಪಾಲನೆಯಲ್ಲಿ ಬೆಳೆದ ರೇವಣಸಿದ್ಧರು ಕೂಡಾ ನಾಥ ಸಿದ್ಧರಾದರು. ಉತ್ತರ ಭಾರತದಲ್ಲೆಲ್ಲಾ ಸಂಚರಿಸಿ ಗೂಢ ವಿದ್ಯೆಗಳನ್ನೆಲ್ಲಾ ಕಲಿತುಕೊಂಡು ಶ್ರೇಷ್ಠನಾಥರೆಂದು ಕರೆಯಿಸಿಕೊಂಡರು. ಇಲ್ಲಿ ವ್ಯಕ್ತವಾಗಿರುವಂತಹ ನಾಥ ಸಿದ್ಧರೆಂದರೆ

೧. ಗೋರಕ್ಷ ನಾಥ

೨. ಜಾಲಂಧರ ನಾಥ

೩. ಕಾನಿಫ ನಾಥ

೪. ಭರ್ತರಿ ನಾಥ

೫. ಗಹನಿ ನಾಥ

೬. ರೇವಣ ನಾಥ

೭. ನಾಗನಾಥ

೮. ಚರ್ಪಟಿನಾಥ

೯. ಮತ್ಸ್ಯೇಂದ್ರ ನಾಥ

ಹೀಗೆ ರೇವಣನಾಥರು ನವನಾಥ ಸಿದ್ಧರ ಸಾಲಿನಲ್ಲಿ ಶೈವಮತ ಸ್ವೀಕರಿಸಿರುವುದರಿಂದ ಇವರು ಸೋಮನಾಥ ಲಿಂಗದಲ್ಲಿ ಜನಿಸಿದರು. ಮತ್ತು ರೇವಣಸಿದ್ಧರು ''ಬಂಧುಲ'' ಗ್ರಾಮದಲ್ಲಿ ಅನ್ನಛತ್ರವನ್ನಿಟ್ಟು ನಡೆಸುತ್ತಿದ್ದಾರೆಂದು ಈ ಗ್ರಂಥದಿಂದ ತಿಳಿದು ಬರುತ್ತದೆ.

ನಾಥಸಿದ್ಧರಾದ ರೇವಣಸಿದ್ಧ ಮತ್ತು ಶೈವ ಸಿದ್ಧರಾದ ಅಲ್ಲಮ ಪ್ರಭುವಿಗೆ ಮೊದಲೇ ಸಂಬಂಧವಿದ್ದುದರಿಂದ ಒಂದೆ ಇವರೆಲ್ಲರೂ ನಾಥ ಸಿದ್ಧರಾಗಿದ್ದರು. ರಾಘವಾಂಕನ ''ಸಿದ್ಧರಾಮ ಚಾರಿತ್ರ್ಯ'' ಎಂಬ ಗ್ರಂಥದಲ್ಲಿ ಸಿದ್ಧರಾಮೇಶ್ವರನೂ ಮೊದಲು ನಾಥ ಸಿದ್ಧನಾಗಿದ್ದನು ಎಂಬುವುದಕ್ಕೆ ಎರಡು-ಮೂರು ಕಡೆ ''ಸಿದ್ಧರಾಮನಾಥ''' ಎಂದು ಬಳಸಲಾಗಿದೆ. ''ಸಿದ್ಧರಾಮನಾಥಂ - ಶೈವ ಸಾಮ್ರಾಜ್ಯ ಸುಖ'' - ಎಂಬ ಮಾತು ನಾಥಸಿದ್ಧರ ಸಂಪರ್ಕ ಹೊಂದಿಯೂ ಕೂಡಾ ಶೈವ ಸಿದ್ಧನಾಗಿದ್ದ ಎಂಬುವುದನ್ನು ಸೂಚಿಸುತ್ತದೆ. ಏಕೆಂದರೆ ಕರ್ನಾಟಕದಲ್ಲಿರುವಂತಹ ಬೌದ್ಧ, ನಾಥ, ಶೈವ ಸಿದ್ಧರು ಇವರಿಗೆ ಪರಸ್ಪರ ಪರಿಚಯ ವಿದ್ದಿರಬೇಕೆಂದು ಕುಂದಣಗಾರ, ಕಪಟರಾಳ ಕೃಷ್ಣರಾಯ ಇವರೆಲ್ಲರ ಅಭಿಪ್ರಾಯವನ್ನು ಅಲ್ಲಗಳೆಯಲು ಸಾಧ್ಯವಿಲ್ಲ.[೬]

ಆಧ್ಯಾತ್ಮ ವಿದ್ಯೆಯ ಸಿದ್ಧಿಯನ್ನು ಪಡೆದವರಿಗೆ ''ಸಿದ್ದರು'' ಎನ್ನುತ್ತಾರೆ. ಅಮೋಘಸಿದ್ಧ ಪರಂಪರೆಯ ದೇವಸ್ಥಾನಗಳು ಬಿಜಾಪೂರ ಜಿಲ್ಲೆಯಲ್ಲಿ ಅರಿಕೇರಿ ಹೋರ್ತಿ, ಉಮರಾಜ, ರೇವತಗಾಂವ ಸಾತಲಗಾಂವಗಳಲ್ಲಿ ಕಂಡುಬರುತ್ತವೆ. ಅರಿಕೇರಿಯ ಜಾತ್ರೆಯ ಕಾಲದಲ್ಲಿ ಸುತ್ತಮುತ್ತಲಿನ ಎಲ್ಲಾ ಸಿದ್ಧ ದೇವಾಲಯಗಳ ಪಲ್ಲಕ್ಕಿಗಳು ಅಮೋಘಸಿದ್ಧನಲ್ಲಿಗೆ ಬಂದು ಗೌರವ ಸಲ್ಲಿಸುತ್ತಿವೆಯೆಂಬ ಪ್ರತೀತಿ ಇದೆ. ಇವನಿಗೆ ಅಮುಗಿ ದೇವಯ್ಯ ಅಮಾಕಸಿದ್ಧ ಎಂತಲೂ ಹಲವಾರು ಹೆಸರುಗಳಿಂದ ಕರೆಯುತ್ತಾ ಬಿಜಾಪೂರ ಜಿಲ್ಲೆಯ ಹಾಲುಮತ ಜನಾಂಗದವರು ಅಪಾರವಾದ ಭಕ್ತಿಯನ್ನಿಟ್ಟಿದ್ದಾರೆಂದು ಮತ್ತು ಕುರುಬರು ಲಿಂಗಧಾರಿಗಳಾಗಿ ಪ್ರಸಿದ್ಧರಾಗಲಿಕ್ಕೆ ಈ ಅಮೋಘ ಸಿದ್ಧನೇ ಕಾರಣವೆಂದೂ ಡಾ.ಫ.ಗು.ಹಳಕಟ್ಟಿಯವರ ಅಭಿಪ್ರಾಯವಾಗಿದೆ. ಅಮೋಘಸಿದ್ಧ ಪ್ರಸಿದ್ಧಿಗೆ ರೇವಣಸಿದ್ಧನೇ ಕಾರಣನಾದುದರಿಂದ ಇವನನ್ನು ಕುರುಬರ ಕುಲಗುರುವೆಂದು ಮತ್ತು ಈ ಕುಲಗಳಲ್ಲಿ ಕಂಡುಬರುವ ಸಿದ್ಧಕುಲದ ಅಸ್ತಿತ್ವಕ್ಕೆ ರೇವಣಸಿದ್ಧ ಮತ್ತು ಅಮೋಘಸಿದ್ಧರೇ ಕಾರಣವೆಂಬುದನ್ನು ಮರೆಯುವಂತಿಲ್ಲ.[೭]

ಕುರುಬರ ಕುಲಗುರು ರೇವಣಸಿದ್ಧರನ್ನು ಸಿದ್ಧೇಶ್ವರ, ಕರಿಸಿದ್ಧೇಶ್ವರ, ಮಲ್ಲಯ್ಯ, ದೊಡ್ಡಯ್ಯ, ಭೀಮೇಶ್ವರ, ಡಿಳ್ಳಿಯಪ್ಪ ಎಂಬ ಅನೇಕ ಹೆಸರುಗಳಿಂದ ಕರೆಯುತ್ತಾರೆ.

ಡಾ. ಎಂ.ಎಂ. ಕಲಬುರ್ಗಿಯವರು ರೇವಣಸಿದ್ಧ ಕಲ್ಯಾಣ ಚಾಲುಕ್ಯ ವಿಕ್ರಮಾದಿತ್ಯ (೧೦೭೬-೧೧೨೬) ಮೂರನೇಯ ಸೋಮೇಶ್ವರ, ಕಲಚುರಿ ತೈಲಪ ಬಿಜ್ಜಳನ ಕಾಲದವರೆಗೆ ಬಾಳಿದ ವಿವರಗಳನ್ನು ಶಾಸನ ಮತ್ತು ಪದ್ಯಗಳಿಂದ ಸ್ಪಷ್ಟಪಡಿಸಿದ್ದಾರೆ.[೮] ರೇವಣಸಿದ್ಧನು ಜೀವಂತವಿರುವಾಗಲೇ (೧೧೨೭ ಕಕ್ಕೇರಿ ಶಾಸನ) ಅವನ ಸಿದ್ಧ ಸಂಪ್ರದಾಯವು ಲಾಕುಳ ಶೈವದಲ್ಲಿ ಆರಂಭಿಸಿದ್ದಿತೆಂದು ಹೇಳಬಹುದಾಗಿದೆ.[೯]

ಎಂ.ಎಂ. ಕಲಬುರ್ಗಿಯವರ ''ರೇವಣಸಿದ್ಧ - ಚರಿತ್ರೆಯ ಎರಡು ಸಂಪ್ರದಾಯಗಳು'' ಎಂಬ ಲೇಖನದಲ್ಲಿ ಹೀಗೆ ಅಭಿಪ್ರಾಯ ಪಟ್ಟಿದ್ದಾರೆ.

''ರೇವಣಸಿದ್ಧ ಮತ್ತು ಸಿದ್ಧರಾಮರು ಮೂಲತಃ ಜಾತಿಯಿಂದ ಕುರುಬರು ಪಂಥದಿಂದ ಸಿದ್ಧರು. ಸಿದ್ಧರಾಮನು ದೀಕ್ಷೆಯನ್ನು ಪಡೆದುಕೊಂಡು ಶರಣ ಧರ್ಮವನ್ನು ಸೇರಿದನು. ಇಂತಹ ಸಮಯದಲ್ಲಿ ವಯೋವೃದ್ಧನಾಗಿದ್ದ ರೇವಣಸಿದ್ಧನನ್ನು ಅವನ ಸಿದ್ಧಪಂಥೀಯರು ಭಕ್ತಿಪ್ರಜ್ಞೆಯಿಂದ - ಶುದ್ಧ ಶೈವರು - ಆಚಾರ್ಯ ಪ್ರಜ್ಞೆಯಿಂದ, ಚಿತ್ರಿಸುವ ಪ್ರಯತ್ನ ನಡೆಸಿದರು.''

ಸಿದ್ಧ ಮತ್ತು ಆಚಾರ್ಯ ಸಂಪ್ರದಾಯದ ರೇವಣಸಿದ್ಧ, ಭಕ್ತಿ ಪ್ರಜ್ಞೆಯಲ್ಲಿ ಮಲ್ಲಣ್ಣ ಕವಿಯ ರೇವಣಸಿದ್ಧ ಕಾವ್ಯವನ್ನು ಚರ್ಚೆಗೆ ಒಳಪಡಿಸಿ ತೌಲನಿಕವಾಗಿ ಹರಿಹರ ಕವಿಯ ಕೊಲ್ಲಿಪಾಕಿಯ ಲಿಂಗೋದ್ಭವ ಅಗಸ್ತ್ಯ ದರ್ಶನ, ಮೊದಲಾದ ಪ್ರಸಂಗಗಳನ್ನು ಮಲ್ಲಣ್ಣ ಕವಿ ಕಾಣದ ವಿಷಯವನ್ನು ಚರ್ಚೆಗೆ ಒಳಪಡಿಸಿದ್ದಾರೆ. ಇವರ ಇನ್ನೊಂದು ಲೇಖನ ''ಸಿದ್ಧರಾಮನು-ಶಿವಯೋಗಿಯಾಗಿರುವಂತಹ ರೇವಣಸಿದ್ಧರನ್ನು ಶಿವಾಚಾರ್ಯರನ್ನಾಗಿ ಮಾಡಿದ'' ಅನೇಕ ವಿಷಯಗಳನ್ನು ಹೊರಹಾಕುತ್ತದೆ.

ಸಿದ್ಧಮಂಕ ಚರಿತೆಗೆ ಸೋಲಾಪುರ ಸಿದ್ಧರಾಮ ಚರಿತ್ರೆಯೆಂದೂ ತಗರ ಪವಾಡ ಕೃತಿಗೆ ರೇವಣಸಿದ್ಧೇಶ್ವರ ಪುರಾಣವೆಂದೂ ಲಿಪಿಕಾರರು ಕರೆದುದು ಇವರಿಬ್ಬರ ಕುರುಬ ಜಾತಿಯನ್ನು ದೃಢಪಡಿಸುತ್ತದೆ. ಇದಲ್ಲದೆ ಚಿಕ್ಕನಾಯಕನಹಳ್ಳಿಯಲ್ಲಿರುವ ಸಿದ್ಧರಾಮನ ಶಿಷ್ಯನಾದ ಸಿದ್ಧಮಂಕನ ಮಠಕ್ಕೆ ಲಿಂಗಾಯತರು ಮತ್ತು ರೇವಣಸಿದ್ಧನ ಮಠಕ್ಕೆ ಕುರುಬರು ಪೂಜಾರಿಗಳಾಗಿದ್ದಾರೆ. ಹೀಗೆ ಸಿದ್ಧರಾಮನು ಕೊನೆಗೆ ನಾಥಪಂಥ ಮತ್ತು ಕುರುಬ ಜಾತಿಯನ್ನು ತ್ಯಜಿಸಿ ಲಿಂಗಾವಂತನಾದನು. ರೇವಣಸಿದ್ಧನು ಕೊನೆಯವರೆಗೂ ನಾಥಪಂಥೀಯ ಕುರುಬನಾಗಿಯೇ ಉಳಿದುದು ಕಾರಣವಾಗಿರಬಹುದೆಂದು ಊಹಿಸಿದ್ದಾರೆ.[೧೦]

ಹೀಗೆ ರೆವಣಸಿದ್ಧನ ಇತಿ ವೃತ್ತ ವಿಚಾರ, ಭೌಗೋಳಿಕ ನೆಲೆ, ಅಲಿಖಿತ ಆಕರಗಳಲ್ಲಿ ಮೂಡಿಬಂದ ರೇವಣಸಿದ್ಧನ ಚಿತ್ರಣ. ಈತನ ಮುಂದುವರೆಕೆಗಾಗಿ ಶಾಂತೊಡೆಯರ ಸಂಪ್ರದಾಯದ ಮಠಗಳು, ಮಠಾಧಿಪತಿಗಳು ಇಂದಿನ ಸ್ಥಿತಿಗತಿ ಮುಂದಿನ ಭವಿಷ್ಯದ ಬಗ್ಗೆ ವಿದ್ವಾಂಸರು ಚರ್ಚಿಸಿರುವುದು ಗಮನಾರ್ಹವಾಗಿದೆ. ವಿಶೇಷವಾಗಿ ಕುರುಬರ ಕುಲಗುರು ರೇವಣಸಿದ್ಧನೇ ೧೪-೧೫ನೇಯ ಶತಮಾನದ ಹೊತ್ತಿಗೆ ರೇಣುಕಾಚಾರ್ಯನನ್ನಾಗಿ ಮಾಡಿರುವುದನ್ನು ಡಾ.ಎಂ.ಎಂ. ಕಲಬುರ್ಗಿಯವರು ಸಕಾರಣವಾಗಿ ಗುರುತಿಸಿದ್ದಾರೆ.

ಬೆಂಗಳೂರು ಜಿಲ್ಲೆಯ ನೆಲಮಂಗಲದಲ್ಲಿ ರೇವಣಸಿದ್ಧನಿಗೆ ದೊಡ್ಡಯ್ಯನೆಂದೂ ಮತ್ತು ಇವನ ಮಗ ರುದ್ರಮುನಿಗೆ ಚಿಕ್ಕಯ್ಯನೆಂದು ದೇವಾಲಯಗಳನ್ನು ಕಟ್ಟಿಸಿ ಜನರು ಪೂಜೆಯನ್ನು ಮಾಡುತ್ತಾರೆ. ಮೈಸೂರಿನ ಒಡೆಯರಾದ ಜಯ ಚಾಮರಾಜರು ರೇವಣಸಿದ್ಧೇಶ್ವರರ ಬೆಟ್ಟಕ್ಕೆ ಕೆಳಗಿನಿಂದ ಮೇಲಿನವರೆಗೆ ಮೆಟ್ಟಿಲುಗಳನ್ನು ಹಾಕಿಸಿ ಅನೇಕರು ರಾಜಾಪುರದ ದೊಡ್ಡ ರೇವಣಾರಾಧ್ಯರ ಸಾನಿಧ್ಯದಲ್ಲಿ ಶಿವಲಿಂಗಗಳ ಪ್ರತಿಷ್ಠಾಪನಾ ಕಾರ್ಯವನ್ನು ಜರುಗಿಸಿದರೆಂದು ''ಭೀಮೇಶಾದ್ರಿ ಪುರಾಣ''ಎಂಬ ಗ್ರಂಥದಲ್ಲಿ ಉಲ್ಲೇಖಿಸಲಾಗಿದೆ.[೧೧]

ಕಾಲ

ರೇವಣಸಿದ್ಧರು ಪುರಾತನ ಕಾಲದಿಂದಲೂ ಕುರುಬ ಜನಾಂಗದಲ್ಲಿ ಬೆಳೆದು ಬಂದಿರುವುದರಿಂದ ಇವರು ''ಕೊಲ್ಲಿಪಾಕಿ'' ಎಂಬ ಗ್ರಾಮದಲ್ಲಿ ಕ್ರಿ.ಶ. ೧೧೧೦ರಲ್ಲಿ ಜನಿಸಿ, ೧೦೭ ವರ್ಷಗಳವರೆಗೆ ಬದುಕಿ ಅದೇ ಗ್ರಾಮದಲ್ಲಿ ಕ್ರಿ.ಶ. ೧೨೧೭ರಲ್ಲಿ ಸಮಾಧಿಯಾದರೆಂದು ಹೇಳುತ್ತಾರೆ.

ವೀರಶೈವ ಸಾಮ್ರಾಜ್ಯದ ಚಕ್ರವರ್ತಿ ಎನಿಸಿದಂತಹ ರೇಣುಕಾಚಾರ್ಯನು ಕೊಲ್ಲಿಪಾಕಿ ಸೋಮನಾಥ ಲಿಂಗದೊಳು ಉದ್ಭವಿಸಿ. ಭೂಲೋಕದಲ್ಲಿ ೧೪೦೦ ವರ್ಷಗಳವರೆಗೆ ಇದ್ದು. ೭೦೦ ವರ್ಷ ಮನುಷ್ಯನ ರೂಪದಲ್ಲಿ ಮತ್ತು ೭೦೦ ವರ್ಷ ಮೂರ್ತಿ ದೇವರಾಗಿ ಲೀಲೆಗಳನ್ನು ಮಾಡಿದ್ದಾರೆ. ಕೈಲಾಸದ ರೇಣುಕನೇ ದ್ವಾಪರ ಯುಗದಲ್ಲಿ ರೇಣುಕಾಚಾರ್ಯರೆಂದೂ, ಕಲಿಯುಗದಲ್ಲಿ ಶ್ರೀ ರೇವಣಸಿದ್ಧನೆಂದೂ ಅವತರಿಸಿದ್ದರು.[೧೪]

ದ್ವಾಪರಯುಗದಲ್ಲಿ ರೇಣುಕನು ಅಗಸ್ತ್ಯಮುನಿಗಳಿಗೆ ವೀರಶೈವ ಸಿದ್ಧಾಂತವನ್ನು ಬೋಧಿಸಿ ಆತನನ್ನು ಶಿವಯೋಗಿಯನ್ನಾಗಿ ಮಾರ್ಪಡಿಸಿದರು. ರಾವಣನ ತಮ್ಮ ವಿಭೀಷಣನ ಪ್ರಾರ್ಥನೆಯಂತೆ ರೇಣುಕನು ಮೂರು ಕೋಟಿ ಶಿವಲಿಂಗಗಳನ್ನು ಏಕಕಾಲದಲ್ಲಿ-ಮೂರು ಕೋಟಿ ಗುರುಗಳ ರೂಪದಿಂದ ಲಂಕೆಯಲ್ಲಿ ಸ್ಥಾಪನೆಮಾಡಿ ಶ್ರೀಲಂಕಾ ನಗರವನ್ನು ''ಶಿವಲಿಂಗ'' ನಗರವಾಗಿ ಬದಲಾಯಿಸಿದರು.

ಅದೇ ರೀತಿಯಾಗಿ ಕಲಿಯುಗದಲ್ಲಿ ರೇವಣಸಿದ್ಧರು ಶಂಕರಾಚಾರ್ಯರಿಗೆ ಚಂದ್ರಮೌಳೇಶ್ವರ ಲಿಂಗವನ್ನು ದಯಪಾಲಿಸಿ ಅವರನ್ನು ಪ್ರಸಿದ್ಧರನ್ನಾಗಿ ಮಾಡಿದರು. ನಂತರ ಚೋಳರಾಜನು ಸಂತಾನವಿಲ್ಲದೇ ಸದಾ ಚಿಂತಿಸುತ್ತಿರುವಾಗ ಅವನಿಗೆ ಸಂತಾನವನ್ನು ದಯಪಾಲಿಸಿ, ಶಿವತತ್ತ್ವಗಳನ್ನು ಬೋಧಿಸಿ ಮಾಸೂರಿನ ಶಿವನ ದೇವಾಲಯಕ್ಕೆ ಭೇಟಿ ನೀಡಿ ಅಲ್ಲಿ ತೊಂದರೆ ಕೊಡುತ್ತಿದ್ದ ಯಕ್ಷ ದಂಪತಿಗಳಾದ ರಾಕ್ಷಸ ವರ್ಗದವರನ್ನು ಸಂಹರಿಸಿ ಮಾಸೂರಿನ ಜನರಿಗೆ ಜೀವದಾನ ಮಾಡಿದನು. ಮತ್ತು ಸತ್ಯ, ನ್ಯಾಯ, ನೀತಿಗೆ ಹೆಸರಾದಂತಹ ಉಜ್ಜೈಯಿನಿ ವಿಕ್ರಮಾದಿತ್ಯನಿಗೆ ವೀರಖಡ್ಗವನ್ನು ದಯಪಾಲಿಸಿ ನಂತರ ಶ್ರೀ ಮಹಾಲಕ್ಷ್ಮಿ ದೇವಾಲಯವಿರುವ ಕೊಲ್ಹಾಪುರಕ್ಕೆ ಬಂದಾಗ ಅಲ್ಲಿ ಗೋರಕ್ಷಕ ಎಂಬ ಅರಸನ ಅಹಂಕಾರವನ್ನು ನಾಶಮಾಡಿ ಅವನನ್ನು ಶಿವಭಕ್ತನನ್ನಾಗಿ ಮಾಡಿದನು. ಮತ್ತು ರೇವಣಸಿದ್ಧರ ಆಶೀರ್ವಾದದಿಂದ ಮಾಯಾ ದೇವಿಯ ಹೊಟ್ಟೆಯಲ್ಲಿ ಜನಿಸಿರುವಂತಹ 'ರೇವಣಾಂಬೆ'ಯನ್ನು ಅಜೇಯ ಖಡ್ಗದ ಆಶೆಗಾಗಿ ಬಿಜ್ಜಳನು ಬಲಿಕೊಡುತ್ತಿದ್ದಾಗ ರೇವಣಸಿದ್ಧರು ಆತನ ದುರ್ಗುಣಗಳನ್ನು ಹೋಗಲಾಡಿಸಿ ಖಡ್ಗವನ್ನು ದಯಪಾಲಿಸಿದರು.[೧೨]

ಈ ರೀತಿಯಾಗಿ ಲೋಕ ಸಂಚಾರ ಮಾಡುತ್ತಾ ಅನಂತ ಲೀಲೆಗಳನ್ನು ಮಾಡಿ ಶಿವ ತತ್ತ್ವವನ್ನು ಜನರಲ್ಲಿ ಬೀರುತ್ತಾ ಸಿದ್ಧಾಪೂರ (ಹೋರ್ತಿ)ಗೆ ಆಗಮಿಸಿದರು. ಸಿದ್ಧಾಪೂರದಲ್ಲಿ ಮಾಳಮ್ಮ (ಆದಿ ಮಾಯೆ) ನವಕೋಟಿ ಸಿದ್ಧರಿಗೆ ನಾನಾ ರೀತಿಯಲ್ಲಿ ಹಿಂಸಿಸುತ್ತಿದ್ದ ವಿಷಯವು, ರೇವಣಸಿದ್ಧರು ಇಂಗಳೇಶ್ವರ ಗವಿಯಲ್ಲಿ ತಪಸ್ಸು ಮಾಡುತ್ತಿರುವಾಗ ತಮ್ಮ ದಿವ್ಯ ದೃಷ್ಟಿಯಿಂದ ಎಲ್ಲವನ್ನೂ ತಿಳಿದುಕೊಂಡು ಸಿದ್ಧರ ಮುಕ್ತಿಗಾಗಿ ಹೊರ್ತಿ ಗ್ರಾಮಕ್ಕೆ ಆಗಮಿಸಿ ಮಾಳಮ್ಮಳ ವಿಷದ ಸ್ತನಗಳನ್ನು ಕೊಯ್ದು ರಕ್ತವನ್ನು ಹೀರಿ. ಮಾಯಮ್ಮಳ ಗರ್ವವನ್ನು ಅಡಗಿಸಿ ಸಿದ್ಧರನ್ನು ಕಾಪಾಡಿದರು.

ತರುವಾಯ ರೇವಣಸಿದ್ಧರು ತೇಲಿಯವರ ಮನೆತನದ ಅಜ್ಜಮ್ಮಳಿಗೆ ವಂಶೋದ್ಧಾರಣೆ ಮಾಡಿ, ಬಸಪ್ಪ ಹಂಚನಾಳ ಇವರಿಗೆ ತಮ್ಮ ಆಶೀರ್ವಾದವನ್ನು ನೀಡಿ ಮೋಕ್ಷವನ್ನು ದಯಪಾಲಿಸಿದುದು. ಹೀಗೆ ಪವಾಡ

ಪುರುಷರಾದಂತಹ ರೇವಣಸಿದ್ಧರು ಹಲವಾರು ಗ್ರಾಮಗಳಿಗೆ ಸಂಚರಿಸುತ್ತಲೇ ಇದ್ದರು. ಹೋರ್ತಿ ಗ್ರಾಮಕ್ಕೆ ಈ ರೀತಿ ಬಂದಿದ್ದರ ಗುರುತಿಗಾಗಿ ಇವರ ಹೆಸರಿನ ಮೇಲೆ ಸುಮಾರು ೧೮ನೇಯ ಶತಮಾನದಲ್ಲಿ ಗ್ರಾಮದ ದಕ್ಷಿಣ ದಿಕ್ಕಿಗೆ ಅಭಿಮುಖವಾಗಿ ರೇವಣಸಿದ್ಧೇಶ್ವರ ದೇವಾಲಯವನ್ನು ನಿರ್ಮಿಸಿ, ಮತ್ತು ಗರ್ಭಗುಡಿಯಲ್ಲಿ ಇವನ ಜನನದ ವೃತ್ತಾಂತದಂತೆ ಶಿವಲಿಂಗವನ್ನು ಪ್ರತಿಷ್ಠಾಪಿಸಿದ್ದಾರೆ. ಅದೇ ರೀತಿಯಾಗಿ ''ರೇವತಗಾಂವ'' ಗ್ರಾಮದಲ್ಲಿಯೂ ಇದೇ ಶತಮಾನದಲ್ಲಿಯೇ ರೇವಣಸಿದ್ಧರ ದೇವಾಲಯವನ್ನು ನಿರ್ಮಿಸಿ ಒಳಗಡೆ ಅಲ್ಲಿಯೂ ಶಿವಲಿಂಗವಿರುವುದು ಕಂಡುಬಂದಿದೆ. ಸುಮಾರು ೧೩ನೇಯ ಶತಮಾನದಲ್ಲಿ ಕಲ್ಯಾಣ ಚಾಲುಕ್ಯರ ಅಧೀನದಲ್ಲಿ ಸಾಮಂತನಾಗಿರುವ ಬಸವರಸನಿಂದ ಯೋಗೀಶ್ವರ ದೇವಾಲಯ ನಿರ್ಮಾಣವಾಗಿದ್ದು, ನಂತರ ಇದಕ್ಕೆ ರೇವಣಸಿದ್ಧೇಶ್ವರ ದೇವಾಲಯವೆಂದು ಬದಲಾವಣೆಯಾಗಿರಬಹುದೆಂದು ಇಲ್ಲಿನ ಸ್ಥಳೀಯರು ವ್ಯಕ್ತಪಡಿಸುತ್ತಾರೆ.

ಉಮರಾಜ ಗ್ರಾಮದಲ್ಲಿಯೂ ಕೂಡಾ ಗರ್ಭಗುಡಿಯಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಿದ್ದನ್ನು ನೋಡಿದರೆ ರೇವಣಸಿದ್ಧರು 'ಕೊಲ್ಲಿಪಾಕಿ'ಎಂಬ ಗ್ರಾಮದ ಸೋಮೇಶ್ವರ ಲಿಂಗದಲ್ಲಿಯೇ ಜನನವಾಗಿದೆಯೆಂದು ಇವರು ಅನಂತ ಪವಾಡಗಳನ್ನು ಮಾಡುತ್ತಾ ದೇಶ ಸಂಚಾರವನ್ನು ಕೈಗೊಂಡು ಇಂಡಿ ತಾಲೂಕಿನ ಹಲವು ಗ್ರಾಮಗಳಿಗೆ ಬಂದಿದ್ದರೆಂದು ಇಲ್ಲಿನ ಜನರು ಹೇಳುತ್ತಾರೆ.

**ಟಿಪ್ಪಣಿಗಳು**

೧. ಹರಿಹರನ ರಗಳೆಗಳು; ರೇವಣಸಿದ್ಧೇಶ್ವರ ರಗಳೆ (ಸಂ), ಡಾ.ಎಂ.ಎಂ.ಕಲಬುರ್ಗಿ, ಪು.೨೮೯

೨. ಹರಿಹರನ ರಗಳೆಗಳು; ರೇವಣಸಿದ್ಧೇಶ್ವರ ರಗಳೆ (ಸಂ), ಡಾ.ಎಂ.ಎಂ.ಕಲಬುರ್ಗಿ, ಪು.೨೮೯

೩. ಶಿವಾಜಿ ಯಾರು? ಮೂಲ ಮರಾಠಿ: ಗೋವಿಂದ ಪಾನಸರೆ ಕನ್ನಡಕ್ಕೆ - ಚಂದ್ರಕಾಂತ ಪೋಕಳೆ ಪ್ರ-೨೦೦೫

೪. ಯವನ ವಿಜೇತ ಚಂದ್ರಗುಪ್ತ ಲೇ. ಪಂಡಿತ ದೀನದಯಾಳ ಉಪಾಧ್ಯಾಯ ಪ್ರ-೧೯೬೬.

೫. ಆಹಾರ ಅಹಿಂಸೆ ಧರ್ಮ್ ಡಾ.ಎಂ.ಜೆ. ಇನಾಮದಾರ ಪ್ರ - ೨೦೦೫

೬. ''ರೇವಣಸಿದ್ದೇಶ್ವರರ'' - ಲೇಖನ (ಹಾಲತೊರೆ - ೨೦೦೭) ಲೇ - ಪ್ರೋ ಸುಧಾಕರ ಪು.೨೪

೭. ''ರೇವಣಸಿದ್ದೇಶ್ವರರ'' - ಲೇಖನ (ಹಾಲತೊರೆ - ೨೦೦೭) ಲೇ - ಪ್ರೋ ಸುಧಾಕರ ಪು.೨೫

೮. ಮಾರ್ಗ - ಸಂಪುಟ-೪, ಲೇ. ಡಾ.ಎಂ.ಎಂ. ಕಲಬುರ್ಗಿ, ಪ್ರ - ೨೦೦೪ ರೇವಣಸಿದ್ಧರ ಲೇಖನ ಪು.೩೫೫.

೯. ಮಾರ್ಗ - ಸಂಪುಟ-೪, ಲೇ. ಡಾ.ಎಂ.ಎಂ. ಕಲಬುರ್ಗಿ, ಪ್ರ - ೨೦೦೪ ರೇವಣಸಿದ್ಧರ ಲೇಖನ ಪು.೩೫೬

೧೦. ಸಿದ್ಧರಾಮ ಶಿವಯೋಗಿಯಾದಿ - ರೇವಣಸಿದ್ಧನನ್ನು 'ಶಿವಾಚಾರ್ಯ' ಮಾಡಿದುದು ಲೇ. ಡಾ.ಎಂ.ಎಂ.ಕಲಬುರ್ಗಿ, (ಲಿಂಗಾಯತಿ) ಜುಲೈ ೧ ೨೦೦೬, ಪು. ೩-೫

೧೧. ''ರೇವಣಸಿದ್ದೇಶ್ವರರ'' - ಲೇಖನ (ಹಾಲತೊರೆ-೨೦೦೭) ಲೇ-ಪ್ರೋ ಸುಧಾಕರ ಪು.೨೫

೧೨. ಸುಕ್ಷೇತ್ರ ಹೋರ್ತಿಯಲ್ಲಿ ''ರೇವಣಸಿದ್ಧೇಶ್ವರರ ಪವಾಡಗಳು'' ಲೇ - ಎಸ್.ಎಸ್. ಪೂಜಾರಿ ಪು.೧೧೨, (ಪ್ರಸ್ತಾವನೆಯ ಪುಟ)

## ೩.೨. ಬೀರಲಿಂಗೇಶ್ವರ

ಬೀರಪ್ಪ, ಬೀರದೇವ, ಬೀರಲಿಂಗೇಶ್ವರನೆಂದು ಕರೆಯಿಸಿಕೊಳ್ಳುವ ಬೀರಪ್ಪ ಕುರುಬರ ಆರಾಧ್ಯ ದೈವ ಪ್ರತಿಯೊಬ್ಬ ಕುರುಬರು ಬೀರಪ್ಪನನ್ನೇ ಸ್ಮರಿಸಿಯೇ ತಮ್ಮ ಕಾಯಕದಲ್ಲಿ ತೊಡಗುತ್ತಾರೆ. ಈತನನ್ನು ಕುರಿತಂತೆ ಹಾಲುಮತ ಜನಪದ ಕಾವ್ಯವೆಂಬ ಬೃಹತ್ ಗ್ರಂಥವನ್ನು ಡಾ. ವೀರಣ್ಣ ದಂಡೆಯವರು, ಸಿದ್ಧಪ್ಪ ಮೇಟಿಯವರಿಂದ ಸಂಗ್ರಹಿಸಿ. ಸಂಪಾದಿಸಿ ಪ್ರಕಟಿಸಿದ್ದಾರೆ. ಜಮಖಂಡಿ ತಾಲೂಕಿನ ಕೊಣ್ಣೂರು, ರಾಯಭಾಗ ತಾಲೂಕಿನ ಅಲಕನೂರು, ಬೀರದೇವರ ಪ್ರಮುಖವಾದ ಕೆಂದ್ರಗಳಾಗಿವೆ. ಅಲ್ಲದೇ ದಕ್ಷಿಣ ಭಾರತದಾದ್ಯಂತ ಬೀರದೇವರ ದೇವಸ್ಥಾನಗಳನ್ನು ನಾವು ನೋಡಬಹುದು.

ಕುರುಬರ ಬೀರಪ್ಪನೇ ಮುಂದೆ ವೀರಭದ್ರನಾಗಿ ರೂಪುಗೊಂಡನೆಂಬ ಸಂಗತಿಯನ್ನು ಆಧಾರಸಹಿತವಾಗಿ ಡಾ. ಎಂ.ಎಂ. ಕಲಬುರ್ಗಿಯವರು ಹೇಳಿದ್ದಾರೆ. ಹೀಗೆ ಕುರುಬರ ಪ್ರಮುಖ ದೈವವಾದ ಬೀರಪ್ಪನನ್ನು ಕುರಿತಂತೆ ಅನೇಕ ಕಥೆ ಹಾಡುಗಳು ಮೌಖಿಕ ರೂಪದಲ್ಲಿದೆ. ಈ ಹಿನ್ನೆಲೆಯಲ್ಲಿ ಇಂಡಿ ತಾಲೂಕಿನಲ್ಲಿಯೇ ಝಳಕಿ, ಬಳ್ಳೊಳ್ಳಿ, ಗ್ರಾಮಗಳಲ್ಲಿ ಬೀರಪ್ಪನ ದೇವಾಲಯಗಳನ್ನು ನಾವು ನೋಡಬಹುದು.

### ಬೀರಪ್ಪನ ಇತಿವೃತ್ತ ವಿಚಾರ

ಬೀರದೇವನ ಜನ್ಮ ವೃತ್ತಾಂತವು ಹಾಲ್ಮತೋತ್ತೇಜಕ ಪುರಾಣದಲ್ಲಿ ಈ ರೀತಿಯಾಗಿದೆ. ಪುಷ್ಪದತ್ತ ನೆಂಬುವವನು ನಿತ್ಯ ತಪ್ಪದೇ ಶಿವ ಪೂಜೆಯಲ್ಲಿ ತೊಡಗಿದ ಸಂದರ್ಭದಲ್ಲಿ ಹರಿಯು ಅಲಕ್ಷ್ಯದಿಂದ ಪುಷ್ಪದತ್ತನ ಪೂಜಾ ಸಮಯದಲ್ಲಿ ಶಿವನಿಗೇರಿಸಿದ್ದ ಕಮಲ ಪುಷ್ಪವನ್ನು ಕೆಡವಿ ತಾನೂ ಶಿವಪೂಜೆಗೆ ತೊಡಗುವಾಗ, ಪಾದದಲ್ಲಿ ಬಿದ್ದ ಹೂವುಗಳನ್ನು ಶಿವನು ಜಂಗುಗಳನ್ನಾಗಿ ಮಾಡಿ ಧರಿಸಿದನು. ಅಷ್ಟೇ ಅಲ್ಲ, ಪುಷ್ಪದತ್ತನ ಪೂಜೆಗೆ ಧಕ್ಕೆ ತಂದ ಈ ಅಪರಾಧ ಪರಿಹಾರಕ್ಕಾಗಿ ಶಿವನು ಹರಿಗೆಕಾಶೀಯಿಂದ ಗಂಗಾಜಲ ತಂದು ಪೂಜೆ ಮಾಡಬೇಕೆಂದು ಹೇಳಿದಾಗ ಹರಿಯು ಶಿವನಾಜ್ಞೆಯನ್ನು ಒಪ್ಪಿಕೊಂಡು ಚಂದ್ರಗಿರಿಯ ಅರಸು ನೀಲಾಂಕಾರ ರಾಜನ ಮಗ ಭರಮದೇವನನ್ನು ತಾನು ಬರುವವರೆಗೆ ಶಿವಪೂಜೆ ಮಾಡಿಕೊಂಡಿರುವಂತೆ ಹೇಳಿ ತನ್ನ ತಂಗಿ ಸುರಾವತಿಯನ್ನು ಅವನಿಗೆ ಕೊಟ್ಟು ಮದುವೆ ಮಾಡಿ ಗಂಗಾಜಲ ತರಲು ನಡೆದನು. ಇತ್ತ ಭರಮದೇವನು ಭಕ್ತಿ ನಿಷ್ಠೆಯಿಂದ ಪೂಜಿಸುತ್ತ ನಡೆದಿರಲು ಕಾಶೀಯಿಂದ ಗಂಗಾಜಲದೊಂದಿಗೆ ಹರಿಯು ಮರಳಿ ಬರಲು ದ್ವಾರಪಾಲಕರು ಒಳಗೆ ಬಿಡಲಿಲ್ಲ. ದ್ವಾರಪಾಲಕರನ್ನು ಧಿಕ್ಕರಿಸಿ ಹರಿಯು ಒಳಗೆ ನಡೆಯುವನು. ಆಗ ಶಿವನು ಭರಮ ದೇವನಿಂದ ಪೂಜೆಗೊಳ್ಳುತ್ತಿರುವುದನ್ನು ಹರಿಯು ಕಂಡು ಅಸೂಯೆಗೊಂಡು ''ಮಕ್ಕಳಿಲ್ಲದ ಭಕ್ತನಿಂದ ಪೂಜೆಯನ್ನು ಸ್ವೀಕರಿಸುವುದು ಸರಿಯೇ'' ಎಂದು ಶಿವನಿಗೆ ಕೇಳಲು ಹರಿಯ ಉಪದೇಶದ ಮಾತುಗಳ ವಾದಕ್ಕೆ ಮಣಿದು ಶಿವ ಭರಮದೇವನನ್ನು ತಿರಸ್ಕರಿಸುವನು. ಇತ್ತ ಮನೆಯಲ್ಲಿ ಭರಮದೇವನ ಹೆಂಡತಿ ಸುರಾವತಿ ಈ ವಿಷಯ ತಿಳಿದು ಮನನೊಂದುಕೊಂಡು ತನಗೆ ಮಕ್ಕಳನ್ನು ಕರುಣಿಸಬೇಕೆಂದು ಶಿವನಲ್ಲಿಗೆ ಹೋಗಿ ಬೇಡಿಕೊಂಡಾಗ. ಮಗಳೇ ನಿನಗೆ ಹೊನ್ನ-ಹೊಕ್ಕುಳ, ಸುವರ್ಣ ಜಡೆ ಇರುವ ಮಗ ಹುಟ್ಟುವನೆಂದು ಆಶೀರ್ವದಿಸಿ ಕಳಿಸುವನು. ಮುಂದೆ ಕೆಲವು ದಿನಗಳಲ್ಲಿ ಸುರಾವತಿ ಗರ್ಭವತಿಯಾದ ಸಂಗತಿ ತಿಳಿದ ಹರಿಯು ತನ್ನ ತಂಗಿಗೆ ಹುಟ್ಟುವ ಮಗನಿಗೆ ತನ್ನ

ಮಗಳನ್ನು ಕೊಟ್ಟು ಮದುವೆ ಮಾಡಬೇಕಾಗುತ್ತದೆ ಎಂದರಿತು ಗರ್ಭದಲ್ಲೇ ಅದನ್ನು ಹೊಸಕಿ ಹಾಕಬೇಕೆಂದು ಸಂಚು ಹೂಡುತ್ತಾನೆ. ಆಗ ಒಂದು ಸಂದರ್ಭವನ್ನು ನೋಡಿಕೊಂಡು ವಿಷಬೆರಿಸಿದ ಅನ್ನವನ್ನು ತಂಗಿಗೆ ಉಣಬಡಿಸಲು ತಂದಾಗ ಗರ್ಭದ ಶಿಶು ಸುರಾವತಿಗೆ ಅನ್ನ ಸೇವಿಸದಂತೆ ಎಚ್ಚರಿಕೆ ನೀಡಿದ್ದರಿಂದ ಹರಿಯ ಈ ಉಪಾಯ ಫಲಿಸುವುದಿಲ್ಲ. ಮುಂದೆ ಕೆಲವು ದಿನಗಳ ನಂತರ ಮತ್ತೆ ಹರಿಯು ಸಂಚು ಹೂಡುವುದರೊಳಗಾಗಿ ಸುರಾವತಿ ಮಗುವಿಗೆ ಜನ್ಮ ನೀಡುತ್ತಾಳೆ. ಇದೇ ಸನ್ನಿವೇಶವನ್ನು ಹರಿಯು ಉಪಯೋಗಿಸಿಕೊಂಡು ಜ್ಯೋತಿಷಿಯ ವೇಷಧರಿಸಿ ಸುರಾವತಿಯಲ್ಲಿಗೆ ಬಂದು ಈ ಮಗು ಹುಟ್ಟಿದ ಗಳಿಗೆ ಚೆನ್ನಾಗಿಲ್ಲ. ಇದರಿಂದ ನಿನ್ನ ಅಣ್ಣ ಹರಿಗೆ ಮೃತ್ಯು ಬರುವುದೆಂದು ತಿಳಿಸಿದಾಗ, ಸುರಾವತಿ ದುಃಖಿತಳಾಗಿ ಇನ್ನೇನು ಮಾಡಬೇಕು ಇದಕ್ಕೆ ಪರಿಹಾರವಿಲ್ಲವೇ! ಎಂದು ಕೇಳುವಳು. ಆಗ ಹರಿಯು ಮಗುವನ್ನು ಅರಣ್ಯದಲ್ಲಿ ಬಿಟ್ಟು ಬರುವುದೊಂದೇ ಪರಿಹಾರ ಎನ್ನುವನು ಆಗ ಅತೀ ಶೋಕದಿಂದ ಪರಿಚಾರಕರನ್ನು ಕರೆದು ಮಗುವನ್ನು ಅರಣ್ಯಕ್ಕೆ ಬಿಟ್ಟುಬರಲು ತಿಳಿಸುವಳು. ಆಗ ಅವರು ಮಗುವನ್ನು ತೊಟ್ಟಿಲಲ್ಲಿ ಹಾಕಿ ಹೊತ್ತುಕೊಂಡು 'ಕೂದಲಿ ವನದ ಹಾಲಹೇವಲಿ' ಹಳ್ಳದ ದಂಡೆಯ ಮೇಲೆ ತೊಟ್ಟಿಲನ್ನು ಇಳುಹಿ ನೀರನ್ನು ಕುಡಿಯುತ್ತಿರುವಾಗ, ಶಿವನ ಮಹಿಮೆಯಿಂದ ತೊಟ್ಟಿಲು ವಟವೃಕ್ಷದ ಮೇಲೆ ಹೋಗಿ ಕೂಡುತ್ತದೆ. ಆಗ ನೀರು ಕುಡಿದು ಪರಿಚಾರಕರು ಮರಳಿ ಬಂದು ನೋಡಲಾಗಿ. ತೊಟ್ಟಿಲು ಕಾಣದಾದಾಗ ಸುತ್ತಲೂ ಕಣ್ಣಾಡಿಸುತ್ತಿರುವ ಸಂದರ್ಭದಲ್ಲಿ ಅವರು ರಕ್ತಕಾರಿ ಸಾಯುತ್ತಾರೆ. ಇತ್ತ ಶಿವನೊಂದಿಗೆ ಆಗಮಿಸಿದ್ದ ಪಾರ್ವತಿಯು ಆ ಕೂಸಿಗೆ ಶಿವಸಿದ್ಧ ಬೀರನೆಂದು ಹೆಸರಿಡುತ್ತಾಳೆ.[೨]

ಇತ್ತ ಚಾಮರಾಯ ಮತ್ತು ಶಾಂಭವಿಯ ಸಾಕು ಮಕ್ಕಳಾದ ಲಕ್ಷ್ಮಮ್ಮ ಮಾಯಮ್ಮ, ಮಂಕಮ್ಮ, ಮುಂಕಾಳೆಮ್ಮ, ಅಕ್ಕಮ್ಮ, ಒಂದಿನ ಈ ಐವರು ಅಕ್ಕ-ತಂಗಿಯರರು ಕುರಿಕಾಯುತ್ತಾ ಈ ಹಳ್ಳಕ್ಕೆ ಬಂದಾಗ, ಅಲ್ಲಿ ಮರದ ಮೇಲೆ ಕೂಸಿನ ಅಳುವನ್ನು ಕೇಳಿ ಅಕ್ಕ-ತಂಗಿಯರು ಆ ಮಗು ನನಗೆ ಬೇಕು, ತನಗೆ ಬೇಕು ಎಂದು ಒಬ್ಬರಿಗೊಬ್ಬರು ವಾಗ್ವಾದದಲ್ಲಿ ತೊಡಗಿದಾಗ ಕೊನೆಗೆ ಅಕ್ಕಮ್ಮ ಒಂದು ಮಾತನ್ನು ಹೇಳುತ್ತಾಳೆ. ನಾವು ಐವರು ಈ ಮರದ ಕೆಳಗೆ ಉಡಿ ಒಡ್ಡಿನಿಲ್ಲೋಣ ಆ ಮಗು ಯಾರ ಉಡಿಯಲ್ಲಿ ಬಂದು ಬೀಳುತ್ತದೆಯೋ ಅವರು ಸಾಕೋಣ ಎಂದು ಉಪಾಯವೊಂದನ್ನು ಹೇಳಿದಾಗ ಎಲ್ಲರೂ ಒಪ್ಪಿ ಉಡಿಯೊಡ್ಡಿ ನಿಲ್ಲುವರು. ಆಗ ಮಗು ಮರದಿಂದ ಅಕ್ಕಮ್ಮನ ಉಡಿಯಲ್ಲಿ ಬೀಳುವುದು. ಮುಂದೆ ಶಿವಸಿದ್ಧ ಬೀರನ ಜೀವ ಸಂರಕ್ಷಣೆಗೆ ಅಕ್ಕಮ್ಮಳೇ ಜವಾಬ್ದಾರಳಾಗುತ್ತಾಳೆ.[೩]

ಡಾ.ವೀರಣ್ಣ ದಂಡೆಯವರು ಸಂಪಾದಿಸಿರುವ ಜನಪದ ಹಾಲುಮತ ಮಹಾಕಾವ್ಯದಲ್ಲಿಯೂ ಬೀರದೇವರ ಹುಟ್ಟಿನ ವಿಷಯವಾಗಿ ಅಲ್ಪ ಸ್ವಲ್ಪ ಬದಲಾವಣೆಯೊಂದಿಗೆ ಇವೇ ವಿಷಯಗಳು ಸಂಬಂಧಿಸಿವೆ.[೪]

ಹಾಲ್ಮತೋತ್ತೇಜಕ ಪುರಾಣದಲ್ಲಿ ಬೀರದೇವರ ಮಾವ ಹರಿದೇವನೆಂದಿದ್ದರೆ ಜನಪದ ಹಾಲುಮತ ಮಹಾಕಾವ್ಯದಲ್ಲಿ ಅವನ ಮಾವನ ಹೆಸರು ಕಾಳೀನಾರಾಯಣ ಎಂದಿದೆ. ಆದರೆ ಹರಿ ಎನ್ನಲಿ, ಕಾಳೀನಾರಾಯಣಯೆನ್ನಲಿ, ಈತ ಮೂಲತಃ ವಿಷ್ಣುವೇ ಆಗಿದ್ದಾನೆ. ಹಾಲ್ಮತೋತ್ತೇಜಕ ಪುರಾಣದಲ್ಲಿ ಬೀರದೇವನನ್ನು ಸಾಕಿದವಳು ಅಕ್ಕಮ್ಮನೆಂದಿದ್ದರೆ. ಜನಪದ ಹಾಲುಮತ ಮಹಾಕಾವ್ಯದಲ್ಲಿ ಅವನನ್ನು ಸಾಕಿದವಳು ಮಾಯಮ್ಮಳಾಗಿದ್ದಾಳೆ.

ಡಾ. ಶ್ರೀರಾಮ ಇಟ್ಟಣ್ಣನವರ ಹಾಲ್ಮತೋತ್ತೇಜಕ ಪುರಾಣ ಮತ್ತು ಜನಪದ ಹಾಲುಮತ ಮಹಾಕಾವ್ಯದ ವಿಷಯ ಹಾಗೂ ಸಂಶೋಧಕರಾದ ಗೋವಿಂದಮೂರ್ತಿ ದೇಸಾಯಿಯವರ ಒಂದು ಲೇಖನದ ವಿಷಯ ಇವುಗಳನ್ನು ಆಧರಿಸಿ ಬೀರದೇವನ ತಂದೆ ತಾಯಿಗಳಾದ ಭರಮದೇವ ಮತ್ತು ಸೂರಮ್ಮರು ಬ್ರಹ್ಮ ಮತ್ತು ಸರಸ್ವತಿಯರೆಂಬುದನ್ನು ಸ್ಪಷ್ಟಗೊಳಿಸಿದ್ದಾರೆ. ಇನ್ನೊಂದು ಕತೆಯ ಪ್ರಕಾರ. ವೀರಭದ್ರನೇ ಸುರಾದೇವಿಯ ಗರ್ಭದಲ್ಲಿ ಜನಿಸುತ್ತಾನೆ. ಒಂದಾನೊಂದು ಕಾಲದಲ್ಲಿ ಶಿವನಿಗೆ ಪಟ್ಟಕಟ್ಟುವಾಗ ಗುಗ್ಗಳ, ಹೋಮ ಮಾಡುತ್ತಿರುವಾಗ ಹೋಮ ಕುಂಡಲದಲ್ಲಿ ಒಂದು ಮಗು ಜನಿಸುತ್ತದೆ. ಈ ಮಗು ಸಮುದ್ರದ ದಂಡೆಯಲ್ಲಿ ಕುಳಿತು ಸೃಷ್ಟಿಯೊಳಗಿರುವ ಸಕಲ ಪ್ರಾಣಿಗಳಿಗೆಲ್ಲಾ ಆಹಾರವನ್ನು ಬೀರುತ್ತಿರುತ್ತದೆ. ಈ ಕಾರಣದಿಂದಲೇ ಆ ಮಗುವಿಗೆ ಬೀರಪ್ಪನೆಂದು ಹೆಸರು ಪ್ರಾಪ್ತವಾಗುವ ಸಂದರ್ಭದಲ್ಲಿ ಪರಶಿವನು, ಪಾರ್ವತಿಯ ಹಾಲಿನಲ್ಲಿ ಹುಟ್ಟಿದ ನಾರಾಯಣನ ತಂಗಿ ಸುರಾಪತಿಯೊಂದಿಗೆ ಭರಮದೇವರ ಮದುವೆಮಾಡಿದನು ಎಂಬ ಉಲ್ಲೇಖವಿದೆ.

ಒಟ್ಟಾರೆ ಬೀರಪ್ಪನಿಗೆ ಸಂಬಂಧಿಸಿದ ಚರಿತ್ರೆ ಪುರಾಣ ಹಾಗೂ ಜಾನಪದ ಕತೆಗಳು ಮಹಾಭಾರತದ ಶ್ರೀಕೃಷ್ಣನ ಜೀವನದ ಜನನದ ಜಾಡಿನಲ್ಲಿ ಹುಟ್ಟಿಕೊಂಡಿವೆ. ಬೀರಪ್ಪನ ರೂಪ ಪರಿವರ್ತನೆಯು ವಿಠಲ ವೆಂಕಟೇಶ ವೀರಭದ್ರ, ವಿರೂಪಾಕ್ಷ, ಪುರಿಜಗನ್ನಾಥ, ಅನೇಕ ಪ್ರಸಿದ್ಧ ದೇವತೆಗಳ ರೂಪದಲ್ಲಿ ಆಗಿರುವುದು ಕಂಡುಬಂದಿದೆ.

### ಬೀರದೇವರ ಪವಾಡಗಳು

ಶಿವಸಿದ್ಧ ಬೀರಪ್ಪನಿಗೆ ಗುರು ರೇವಣಸಿದ್ಧ ಪಂಚಾಕ್ಷರಿ ಮಂತ್ರ ಬೋಧಿಸಿ ಲಿಂಗದೀಕ್ಷೆ ನೀಡಿದರು. ಆಗ ಬೀರಣ್ಣನ ಲೀಲೆಗಳು ಚಿಕ್ಕಂದಿನಿಂದಲೇ ಪ್ರಾರಂಭಗೊಂಡವು. ಚೆಂಡಿನಾಟ ಆಡುವಾಗ ಸತ್ತು ಬಿದ್ದ ಬಾಲಕನನ್ನು ಬದುಕಿಸುವುದು. ಮಂಡಲಗಿರಿ ಬಿಟ್ಟು ಬೆಳ್ಳಿಗುತ್ತಿ ಗ್ರಾಮಕ್ಕೆ ಬರುವಾಗ ಮಂಡಲಗಿರಿಯ ಜನರು ಇವನನ್ನು ಹಿಂಬಾಲಿಸುತ್ತಿರುವುದನ್ನು ನೋಡಿ ಅಕ್ಕಮ್ಮ ಮತ್ತು ಬೀರಣ್ಣ ಸರ್ಪಾಕೃತಿಯಾಗಿ ಹುತ್ತಿನೊಳಗೆ ಹೋಗುವುದು ನಂತರ ಹುತ್ತಿನಿಂದ ಮನುಷ್ಯ ಆಕೃತಿಯಾಗಿ ಹೊರಬಂದು ಇದು ''ನಾಗಠಾಣ'' ಗ್ರಾಮವಾಗಲಿ ಎಂದು ಹರಸುತ್ತಾ ಬೆಳ್ಳಿಗುತ್ತಿಗೆ ಬರುವುದು. ಬೆಳ್ಳಿಗುತ್ತಿಯಲ್ಲಿ ಸತ್ತ ಕುರಿಗಳನ್ನು ಬದುಕಿಸುವುದು. ನೀರು ತರುವ ಎಳ್ಳೂರು ತರುಣಿಯರ ತುಂಬಿದ ಕೊಡಗಳನ್ನು ಒಂದೇ ಬಾಣದ ಏಟಿಗೆ ಹೊಡೆದಾಗ ಅವೆಲ್ಲ ಕೊಡಗಳು ತೂತು ಬಿದ್ದದ್ದರಿಂದ ಕೋಪಗೊಂಡು ಅವರೆಲ್ಲ ತಂದೆ ತಾಯಗಳರಿಯದ ನೀಚನೆಂದು ಮೊದಲಿಸಲು ತಕ್ಷಣವೇ ಮೇಣದ ಬಾಣ ಹೊಡೆದು ಎಲ್ಲಾ ಕೊಡಗಳ ತೂತುಗಳನ್ನು ಬಂದು ಮಾಡಿದ ಪ್ರಸಂಗ ಒಂದಾದರೆ, ಅಕ್ಕಮ್ಮಳಿಂದ ತನ್ನ ಜನನ ವೃತ್ತಾಂತ ತಿಳಿದು ಹರಿಯ ಮಗಳಾದ ಕನ್ನಿಕಾಮಾಲೆಯನ್ನು ಅಪಹರಿಸಿ ತರುವೆನೆಂದು ಶಪಥಮಾಡಿ ವೈಕುಂಠಪುರಕ್ಕೆ ಹೋಗುವನು. ಬಳೆಗಾರನ ವೇಷ ತೊಟ್ಟು ಅವಳನ್ನು ಕಂಡು ಶಿವಸಿದ್ಧ ಬೀರಣ್ಣ ತನ್ನ ವೃತ್ತಾಂತ ತಿಳಿಸಿ ನಿನ್ನನ್ನು ಕರೆದುಕೊಂಡು ಹೋಗಲು ಬಂದಿರುವೆನೆಂದು ಹೇಳಿ ಗುರು ಸ್ಮರಣೆಯನ್ನು ಮಾಡಿದಾಗ ದೇವತೆಗಳು ಕಿನ್ನರ ಪುರುಷರೊಂದಿಗೆ ಅರಮನೆಯಲ್ಲಿ ಪ್ರತ್ಯಕ್ಷರಾಗಿ ಗಂಧರ್ವರೇ ಸುರಗಿ ಸುತ್ತಿ ವಧುವರರಿಗೆ ಕಂಕಣ ಕಟ್ಟಿ ಮಂಗಲ ಸೂತ್ರ ಕಟ್ಟಿಸಿ ಕುದುರೆ ಮೇಲೆ ಕನ್ನಿಕಾಮಾಲೆಯನ್ನು ಕರೆದುಕೊಂಡು ಹೋಗೆಂದು ಅಶೀರ್ವದಿಸಿದರು. ಮುಂದೆ ಭಕ್ತಿ ಶ್ರದ್ಧೆಯನ್ನು ಒಳಗೊಂಡ ಒಬ್ಬ ಶಿಷ್ಯನನ್ನು ದಯಪಾಲಿಸಬೇಕೆಂದು ಶಿವನಿಗೆ ಕೇಳಿದಾಗ ತುಕ್ಕಪ್ಪರಾಯ

ಮತ್ತು ಕನಾಬಾಯಿಯವರ ಮಗನಾದ ಮಾಳಿಂಗರಾಯನನ್ನು ಶಿಷ್ಯನನ್ನಾಗಿ ಕಳುಹಿಸುವನು. ಒಮ್ಮೆ ಗುರುಶಿಷ್ಯರಿಬ್ಬರು ಕೂಡಿ ಮದವೇರಿದ ಕೋಣವನ್ನು ಕೊಂದದ್ದಕ್ಕಾಗಿ ಆ ಸ್ಥಳ ಕೋಣಗನೂರು ಆಗಲೆಂದು, ಆ ಕೋಣದ ಮುಂಡ ಬಿದ್ದಲ್ಲಿ ಮುಂಡಗನೂರು ಆಗಲೆಂದು ಹರಿಸಿ ಮುಂದೆ ನಡೆದರು. ಬೀರೇಶ್ವರನ ಇಚ್ಛೆಯಂತೆ ರೇವಣಸಿದ್ಧರು ಪ್ರತ್ಯಕ್ಷರಾಗಿ ಗುರು ಶಿಷ್ಯರನ್ನು ಆಶೀರ್ವದಿಸಿ ಭುವನ ಉದ್ಧಾರಕ್ಕಾಗಿ ನೀವಿಬ್ಬರೂ ಮಹತ್ವದ ಮಹಿಮೆ ತೋರುತ್ತಾ ಪ್ರಸಿದ್ಧರಾಗಿರಿ ಸಕಲ ಕಾರ್ಯಗಳಲ್ಲೂ ಜಯ ನಿಮ್ಮದಾಗಲಿ ನಂತರ ಶಿವಪೂರ ಗ್ರಾಮಕ್ಕೆ ಬನ್ನಿರೆಂದು ಹೇಳುತ್ತಾ ಹಾಲುಮತದವರ ಪೂರ್ವಜರ ವಿಚಾರಗಳನ್ನು ವ್ಯಾಸೋಕ್ತಿಯಂತೆ ಬ್ರಹ್ಮಾಂಡ ಪುರಾಣ ಮತ್ತು ವೇದ ಮೂರ್ತಿಗಳ ಆಧಾರದಿಂದ ವಿವರಿಸಿದ ಭೀಮಕವಿಯ ವಿಚಾರಗಳನ್ನು ಶಾಂತಪ್ಪ ಡಂಬಳ ಅವರು ರಸ್ತಾಪೂರ ಭೀಮಕವಿ ಸಾಹಿತ್ಯ ಸಾಧನ ಲೇಖನವಲ್ಲಿ ಪ್ರಸ್ತಾಪಿಸಿದ್ದಾರೆ."

ಹೀಗೆ ಗುರು ಶಿಷ್ಯರಿಬ್ಬರೂ ದೇಶ ಸಂಚಾರಕ್ಕೆ ಹೊರಟು ಸುಕ್ಷೇತ್ರಗಳನ್ನು ಸಂದರ್ಶಿಸುತ್ತಾ ಲೀಲೆಗಳನ್ನು ಮಾಡುತ್ತಾ ಸಾಗಿದಾಗ ತನ್ನೊಂದಿಗೆ ವೀರ ಮಾಳಿಂಗರಾಯ ಅನಂತ ಲೀಲೆಗಳನ್ನು ನಡೆಸತೊಡಗಿದ್ದನ್ನು ಕಂಡು ಸಂತಸಗೊಂಡು ಶಿವಸಿದ್ಧ ಬೀರಣ್ಣನು ತನ್ನ ಶಿಷ್ಯನನ್ನು ಪರೀಕ್ಷಿಸಲು ಮುಂದಾಗಿ ಕಪ್ಪೆ ಕಲಕದ ಜಲ ಮತ್ತು ಹುಳ ಮುಟ್ಟದ ಹೂವುಗಳನ್ನು ತಂದು ಪೂಜಿಸಬೇಕೆಂದು ಆಜ್ಞೆಯಿತ್ತನು. ತಕ್ಷಣವೇ ಗುರುವಿನ ಆಜ್ಞೆಪಾಲನೆಗಾಗಿ ಪಾಂಡ್ರಕೋಟೆಗೆ ಹೊರಟು ಹಾದಿಯಲ್ಲಿ ಅವೆಷ್ಟೋ ತೊಂದರೆಗಳು ಬಂದರೂ ಬಗ್ಗದೇ ಅವೆಲ್ಲವುಗಳನ್ನು ಎದುರಿಸುತ್ತಾ ಕಪ್ಪೆ ಕಲಕದ ಜಲ ಮತ್ತು ಹುಳ ಮುಟ್ಟದ ಹೂವುಗಳನ್ನು ತಂದು ಬೀರಣ್ಣನನ್ನು ಪೂಜಿಸಬೇಕೆನ್ನುವಷ್ಟರಲ್ಲಿ ಬೀರಣ್ಣ ಸರ್ಪಾಕೃತಿಯಾಗಿ ಹುತ್ತಿನಲ್ಲಿ ಸೇರಿಕೊಳ್ಳುತ್ತಾನೆ. ಇತ್ತ ಮಾಳಿಂಗರಾಯ ಕಂಬಳಿ ಬೀಸಿ ಬೀಸಿ ಸುಸ್ತಾದರೂ ಗುರು ಹೊರಗೆ ಬರಲಾರದ್ದನ್ನು ಕಂಡು ಧ್ಯಾನಿಸಲು ಅನುವಾದಾಗ ಬೀರಣ್ಣ ಪ್ರತ್ಯಕ್ಷನಾಗಿ ಶಿಷ್ಯನಿಂದ ಪೂಜೆಗೊಳ್ಳುತ್ತಾನೆ. ಮುಂದೆ ಬೀರಣ್ಣನಿಗೆ ರೇವಣಸಿದ್ಧನು ಪ್ರತ್ಯಕ್ಷನಾಗಿ ಇನ್ನು ನಿನ್ನ ಅವತಾರ ಇಲ್ಲಿಗೆ ಮುಗಿಯಿತು ನೀನು ಸ್ವರ್ಗವನ್ನು ಸೇರು ಎಂದು ಹೇಳಿ ನಿನ್ನ ಸೇವೆ ಭೂಲೋಕದಲ್ಲಿ ಅವಶ್ಯಕತೆಯಿರುವುದರಿಂದ ನೀನು ಕರಿಸಿದ್ಧನ ಅವತಾರದಲ್ಲಿ ಪವಾಡಗಳ ಮಹಿಮೆಯನ್ನು ತೋರು ಎಂದಾಗ ಬೀರಣ್ಣನು ಮತ್ತೆ ಭೂಲೋಕದಲ್ಲಿ ಕರಿಸಿದ್ಧನ ಅವತಾರದಲ್ಲಿ ಜನಿಸಿ ಮಾನವರ ಉದ್ಧಾರಕ್ಕಾಗಿ ಶ್ರಮಿಸಿದನೆಂದು ಪ್ರತೀತಿ ಇದೆ.

ಇಲ್ಲಿ ಬೀರದೇವರ ಕುರಿತು ಕನಕದಾಸರು ತಮ್ಮ ಪದ್ಯದಲ್ಲಿ ಹೀಗೆ ಹೇಳಿದ್ದಾರೆ.

''ನಾವು ಕುರುಬರು ನಮ್ಮ ದೇವರು ಬೀರಯ್ಯ

ಕಾವ ನಮ್ಮಜ್ಜ ನರ ಕುರಿಯು ಹಿಂಡುಗಳ''

ಸಮಾಜದಲ್ಲಿ ಬಹು ದೇವೋಪಾಸನೆಯನ್ನು ತಡೆಯುವ ಸಂಕಲ್ಪದೊಂದಿಗೆ ಬೌದ್ಧ, ಜೈನ, ಕ್ರೈಸ್ತ ಅನೇಕ ಧರ್ಮಗಳು ಉದಯವಾದವು. ಬಹು ದೇವೋಪಾಸನೆಗೆ ಬೇಸತ್ತ ಹಿಂದೂಗಳು ಧರ್ಮವನ್ನು ಬದಲಾಯಿಸುತ್ತಾ ನಡೆದರು. ಇದನ್ನು ತಡೆಯುವ ಉದ್ದೇಶದಿಂದ ಎಲ್ಲಾ ಕ್ಷುದ್ರ ದೇವತೆಗಳನ್ನು ಒಂದುಗೂಡಿಸಿ ಬಹಳ ದಿನದಿಂದ ಪೂಜಿಸುತ್ತಿದ್ದ ಮೈಲಾರನ ಸ್ಥಾನದಲ್ಲಿ ಹೊಸ ಬೀರಪ್ಪನನ್ನು ಸೃಷ್ಟಿಸಿದರು. ಹೀಗೆ ಬೀರಪ್ಪನ ಪ್ರಚಾರದ ಉಪಯೋಗ

ಈ ರೀತಿಯಲ್ಲಿ ಬಳಸಿಕೊಂಡಿರುವ ಸಾಧ್ಯತೆಯನ್ನು ಇಲ್ಲಿ ಕಾಣಬಹುದು ಮತ್ತು ಇವತ್ತಿನ ದಿನದಲ್ಲಿ ಪ್ರತಿಯೊಂದು ಗ್ರಾಮಗಳಲ್ಲಿ ಬೀರಪ್ಪನ ಮಂದಿರಗಳು ಕಂಡುಬರುತ್ತವೆ.

ಬಸವಣ್ಣನವರು ಬೀರದೇವರ ಚರಿತ್ರೆಗೆ ಸಂಬಂಧಿಸಿದಂತೆ ಈ ವಚನಗಳಲ್ಲಿ ಹೀಗೆ ಹೇಳಿದ್ದಾರೆ.

''ಮಾರಯ್ಯ ಬೀರಯ್ಯ, ಖೇಚರಗಾವಿಲ ಅಂತರ ಬೆಂತರ

ಕಾಳಯ್ಯ, ಮಾರಯ್ಯ ಕೇತಯ್ಯಗಳೆಂಬ ನೂರು ಮಡಿಕೆಗೆ

ನಮ್ಮ ಕೂಡಲ ಸಂಗಮದೇವ ಶರಣೆಂಬುದೊಂದೆ ದಡಿಸಾಲದೆ.''[೭]

ಬೀರಪ್ಪನ ಕಲ್ಪನೆ ಬಸವಣ್ಣನವರಿಗಿಂತಲೂ ಪ್ರಾಚೀನವೆಂದು ಕಂಡುಬಂದಿದೆ. ಮಹಾರಾಷ್ಟ್ರದಲ್ಲಿ ಕ್ರಿ.ಶ. ೧೫ನೆಯ ಶತಮಾನದಲ್ಲಿಯೇ ಖಂಡೋಬಾ ಮತ್ತು ''ಬೀರೋಬಾ'' ಎಂಬ ದೇವರುಗಳು ಆರಾಧನೆಗೊಳ್ಳುತ್ತಿರುವ ಬಗ್ಗೆ ದಾಖಲೆಗಳಿವೆ. ಕುರುಬರ ಡೊಳ್ಳಿನ ಹಾಡುಗಳಲ್ಲಿ ಹಾಗೂ ಜನಪದ ಕತೆಗಳಲ್ಲಿ ರೇವಣಸಿದ್ಧ ಗುರು, ಮತ್ತು ಬೀರಪ್ಪ ಶಿಷ್ಯನೆನ್ನುವ ರೀತಿಯಲ್ಲಿ ಕಥೆ ಸೃಷ್ಟಿಯಾಗಿರುವುದಕ್ಕೆ ಗಮನ ಹರಿಸಿದರೆ ಕಥೆ ಪುರಾಣ ರಚನೆಕಾರರಿಗೆ ಇತಿಹಾಸದ ತಿಳುವಳಿಕೆ ಇಲ್ಲದಿರುವುದನ್ನು ಕಂಡುಬಂದಿದೆ. ಮಾಳಿಂಗರಾಯ, ಕರಿಸಿದ್ಧ ಪದ್ಮಗೊಂಡರ ಪುರಾಣಗಳಲ್ಲಿ ಇವನನ್ನು ಕೊಣ್ಣೂರು ಬೀರಪ್ಪ ಎಂತಲೇ ಕರೆಯುತ್ತಾರೆ.[೮]

ಕುರುಬರು ವಾಸಿಸುವಂತಹ ಗ್ರಾಮಗಳಲ್ಲಿ ಸಾಮಾನ್ಯವಾಗಿ ಬೀರಪ್ಪನ ದೇವಸ್ಥಾನಗಳಿರುವುದು ಕಂಡುಬರುತ್ತದೆ. ಪಶುಪಾಲಕರು ತಮ್ಮ ಆಲೋಚನೆಯ ಆಚೆ ಮತ್ತೊಂದು ಅಲೌಕಿಕ ಶಕ್ತಿ ಇರುವುದನ್ನು ಮನಗಂಡು ಅದನ್ನು ''ಪರಮ'' ಎಂದು ಕರೆದರು. ಇದೇ ಮುಂದೆ ''ಭರಮ''ವಾಗಿ 'ಬ್ರಹ್ಮ'ವಾಗಿ ರೂಪುಗೊಂಡಿತು. ಕಾಲಾಂತರದಲ್ಲಿ ಬ್ರಹ್ಮನೇ ಆರಾಧನೆಗೆ ನಿಂತಾಗ ಇವನ ಪಕ್ಕದಲ್ಲಿಯೇ ಬೀರಪ್ಪನ ದೇವಸ್ಥಾನಗಳನ್ನು ಕಟ್ಟಿಸಿದರು. ಆದುದರಿಂದ ಪುರಾಣಗಳು ಸೃಷ್ಟಿಯಾದ ಕಾಲದಿಂದ ಬ್ರಹ್ಮನೇ ಬೀರಪ್ಪನೆಂದೂ ಕುರುಬರ ದೈವವಾಗಿದ್ದನ್ನು ಕಂಡುಬಂದಿದೆ.

**ಇಂಡಿ ತಾಲೂಕಿನ ಬೀರದೇವರ ದೇವಸ್ಥಾನಗಳು ಬಳ್ಳೊಳ್ಳಿ ಗ್ರಾಮ**

ಭೀಮಾ ನದಿ ಸಮೀಪದಲ್ಲಿ ಇರುವಂತಹ ಇಂಡಿ ತಾಲೂಕಿನ 'ಬಳ್ಳೊಳ್ಳಿ' ಗ್ರಾಮ ಸುಮಾರು ೩೫೦೦ ಜನಸಂಖ್ಯೆಯನ್ನು ಹೊಂದಿದೆ. ಗ್ರಾಮದ ಪ್ರಮುಖ ರಸ್ತೆಯ ಪ್ರದೇಶದ ಬಲಭಾಗದಲ್ಲಿ ಪೂರ್ವ ದಿಕ್ಕಿಗೆ ಅಭಿಮುಖವಾಗಿರುವ ಬೀರದೇವರ ಗುಡಿ ನೋಡಲು ಸಿಗುತ್ತದೆ. ಈ ದೇವಸ್ಥಾನವು ೩೦-೪೦ ವರ್ಷಗಳ ಇತ್ತೀಚಿನದಾಗಿದೆ. ಇದಕ್ಕೂ ಮೊದಲು ಈ ದೇವಸ್ಥಾನವು ಈಗಿರುವ ದೇವಸ್ಥಾನದ ಸ್ಥಳದಲ್ಲಿಯೇ ಕಟ್ಟೆಯಾಕಾರದಲ್ಲಿ ಬೇವಿನ ಮರದ ಕೆಳಗೆ ಇತ್ತೆಂದು ಇಲ್ಲಿಯ ಸ್ಥಳೀಯ ಭಗವಂತರಾಯ ಪೂಜಾರಿ ಹೇಳುತ್ತಾನೆ. ಈ ದೇವಸ್ಥಾನವು (ಕಟ್ಟೆಯಾಕಾರದ್ದು) ಕೇವಲ ನಾಲ್ಕೈದು ತಲೆಮಾರುಗಳಿಂದ ಈಚಿನದೆಂದು ಹೇಳುತ್ತಾರೆ. ಈ ದೇವಸ್ಥಾನದಲ್ಲಿ ಕಾಡುಗಲ್ಲಿನ ರೂಪದ ಮೂರ್ತಿಗಳನ್ನು ಪೂಜಿಸುತ್ತಾ ಇರುವುದು ಕಂಡುಬಂದಿದೆ.

ಪ್ರತಿವರ್ಷ ದೀಪಾವಳಿ ಅಮಾವಾಸ್ಯೆಗೆ ಹಾಲುಮತ ಸಮಾಜ ಬಾಂಧವರೆಲ್ಲಾ ಒಂದುಗೂಡಿ ಒಂದು ದಿನದ ಜಾತ್ರೆಯನ್ನು ಮಾಡಿ ಡೊಳ್ಳಿನ ಹಾಡಿಕೆ ಮೂಲಕ ದೇವರ ಜಾಗರಣೆ ಮಾಡುವ ಸಂಪ್ರದಾಯವಿದ್ದು.

ಸಜ್ಜಕ, ಹುಗ್ಗಿಯನ್ನು ಮಾಡಿ ದೇವರಿಗೆ ನೈವೇದ್ಯ ಹಿಡಿದು ಬಂದ ಭಕ್ತರಿಗೆಲ್ಲಾ ಪ್ರಸಾದವನ್ನು ನೀಡುತ್ತಾರೆ. ಗಂಟೆ, ಧೂಪ, ಆರತಿ, ಕಂಚಿನ ಕುದುರೆ ಮೂರ್ತಿಗಳೊಂದಿಗೆ ದಿನಾಲು ಪೂಜಿಸುತ್ತಿರುವಂತಹ ಸಂಗತಿ ತಿಳಿದುಬಂದಿದೆ.

**ಝುಳಕಿ ಗ್ರಾಮ**

ಇಂಡಿ ತಾಲೂಕಿನ ಈ ಗ್ರಾಮದ ಪ್ರವೇಶದ ಎಡಬದಿಗೆ ಪೂರ್ವ ದಿಕ್ಕಿಗೆ ಅಭಿಮುಖವಾಗಿ ಕಟ್ಟಿರುವ ದೇವಸ್ಥಾನವೇ ಬೀರದೇವರ ದೇವಸ್ಥಾನವಾಗಿದೆ. ಮೊದಲು ಗ್ರಾಮದಲ್ಲಿರುವಂತಹ 'ಗೈಂಯತಾಣ' ಗೌಂವಠಾಣ ಜಾಗದಲ್ಲಿ ಕಲ್ಲುಮಣ್ಣಿನಿಂದ ನಿರ್ಮಿಸಿದ ಕಟ್ಟಡದ ಮೇಲ್ಛಾವಣಿಯು ಜಂತಿಗಳಿಂದ ಕೂಡಿತ್ತು. ಸುಮಾರು ೧೮-೨೦ ವರ್ಷಗಳ ಈಚೆ ನಿರ್ಮಾಣಗೊಂಡ ದೇವಸ್ಥಾನದಲ್ಲಿ ಬೀರದೇವರ ಕಂಚಿನ ಮೂರ್ತಿಗೆ ನಿತ್ಯ ಎರಡು ಹೊತ್ತು ಪೂಜೆಯಾಗುತ್ತದೆ. ಈ ದೇವರ ಪೂಜೆಗಾಗಿ ಕಂಬಳಿ. ಕಂಚಿನ ಕುದುರೆ ಭಂಡಾರ ಗಂಟೆಯ ಸಪ್ಪಳ. ನಗಾರಿ, ಡೊಳ್ಳಿನಿಂದ ಪೂಜೆಯಾಗುತ್ತದೆ. ಗ್ರಾಮದ ಜನರೆಲ್ಲಾ ಪಟ್ಟಿಯೆತ್ತಿ ಕೂಡಿಸಿದ ಕಾಳು ಕಡಿಗಳಿಂದ ಅನ್ನ ಪ್ರಸಾದ ನಡೆದು ಬಂದಂತಹ ಭಕ್ತಾದಿಗಳು ಕೂಡಾ ಪ್ರಸಾದವನ್ನು ಸೇವಿಸುತ್ತಾರೆ. ಈ ಜಾತ್ರೆಯ ದಿನದಂದು ಮಾಳಿಂಗರಾಯನ ನಾಟಕ ಡೊಳ್ಳಿನ ಹಾಡಿಕೆಗಳು ಜರುಗುತ್ತವೆ ಮತ್ತು ಪ್ರತಿ ವಾರವೂ ಇಲ್ಲಿ ಡೊಳ್ಳಿನ ಹಾಡಿಕೆ ಮುಖಾಂತರ ಬೀರದೇವರ ಆರಾಧನೆ ಮಾಡುವ ಪದ್ಧತಿಯನ್ನು ಬೆಳೆಸಿಕೊಂಡು ಬಂದಿದೆಯೆಂದು ೮೦ ವರ್ಷ ಮುದುಕ ಸಿದ್ದಪ್ಪನೆಂಬ ಸ್ಥಳೀಯನಿಂದ ತಿಳಿದುಬರುತ್ತದೆ.

**ಪಟ್ಟಣ**

ಹಾಲುಮತದವರು ಮತ್ತು ಎಲ್ಲಾ ಜನಾಂಗದವರು ಈ ಪಟ್ಟಣದಲ್ಲಿ ವಾಸವಾಗಿದ್ದಾರೆ. ಈ ಗ್ರಾಮದ ದಕ್ಷಿಣ ದಿಕ್ಕಿಗೆ ಕಾಣುವ ದೇವಸ್ಥಾನವೇ ಬೀರಪ್ಪನದಾಗಿದೆ. ಗರ್ಭಗುಡಿ ಮತ್ತು ಪಡಸಾಲೆಯನ್ನು ಹೊಂದಿರುವ ದೇವಸ್ಥಾನದ ಬಾಗಿಲು ಉತ್ತರ ದಿಕ್ಕಿಗೆ ಅಭಿಮುಖವಾಗಿದ್ದು ಸುತ್ತಮುತ್ತಲಿನ ಭಕ್ತರನ್ನು ಆಕರ್ಷಿಸುತ್ತಿದೆ. ಒಳಗಡೆ ಕಲ್ಲಿನ ಮೂರ್ತಿಯಿದ್ದು ಯುಗಾದಿ ಮತ್ತು ದೀಪಾವಳಿಯ ಸಮಯದಲ್ಲಿ ಒಂದೊಂದೇ ದಿನದಲ್ಲೆ ಜಾತ್ರೆಯಾಗುತ್ತದೆ. ರಾತ್ರಿಯಿಡೀ ಡೊಳ್ಳಿನ ಹಾಡಿನ ವಾಲಗದ ಜಾಗರಣೆ ನಡೆಯುವುದು. ಮರುದಿನ ಗೋಧಿ ಸಜ್ಜಕ ಹಾಗೂ ಬಾಳೇ ಹಣ್ಣು ಅಥವಾ ಮಾವಿನಕಾಯಿ ಸೀಕರಣೀಯ ಅನ್ನಸಂತರ್ಪಣೆಯು ನಡೆಯುತ್ತದೆ.

**ಹಿರೇರೂಗಿ**

ಸರ್ವಧರ್ಮೀಯರನ್ನು ಹೊಂದಿರುವ ಕರಿಯ ಕಲ್ಲಿನ ಕಟ್ಟಡಗಳ ಊರೇ ಹಿರೇರೂಗಿ. ಅಂದಾಜು ೧೫೦೦೦ ಜನಸಂಖ್ಯೆಯೊಂದಿಗೆ ಊರ ಸುತ್ತಲೂ ತೋಟ ಪಟ್ಟಿಗಳನ್ನು ಹೊಂದಿದ ಸಿರಿವಂತ ಗ್ರಾಮ. ಈ ಊರಿನ ಪ್ರಮುಖ ದೇವರುಗಳಲ್ಲಿ ಬೀರದೇವನೂ ಒಬ್ಬ. ಗ್ರಾಮ ಪ್ರವೇಶಿಸುತ್ತಿದ್ದಂತೆಯೇ ಹನುಮಾನ ಮಂದಿರದ ಬದಿಯಲ್ಲಿ ಹಾಯ್ದು ಊರ ಒಳಹೋದರೆ ಸಾಕು. ಅಲ್ಲಿ ಬೇವಿನ ಗಿಡದ ಕಟ್ಟೆಯ ನೆರಳಿನಲ್ಲಿ ಕಾಣಸಿಗುವ ದೇವಾಸ್ಥಾನವೇ ಬೀರದೇವರದು. ಸುಮಾರು ೩ ತಲೆಮಾರುಗಳ ಹಿಂದೆ ಬೀರಪ್ಪ ಕಲ್ಲಿನ ಗುಂಪೆಯಲ್ಲಿ ಹೂತು ಹೋಗಿದ್ದನೆಂದು ಆಗಾಗ ಊರ ಜನರ ಕನಸಿನಲ್ಲಿ ಬರುತ್ತಿದ್ದನೆಂಬ ಹಿನ್ನೆಲೆಯಲ್ಲಿ ಊರಿನವರೆಲ್ಲಾ ಸೇರಿ ಕಲ್ಲಿನ ಹೊದಿಕೆಯನ್ನು

ತೆಗೆದಾಗ ಎಲ್ಲರಿಗೂ ವಿಸ್ಮಯ. ಆ ಕಲ್ಲ ಹೊದಿಕೆಯ ಮಧ್ಯದ ಕಲ್ಲೊಂದರಲ್ಲಿ ಒಡಮೂಡಿದ ಬೀರಪ್ಪ ಕ್ರಮೇಣ ಇವನ ಮಹಿಮೆಗೆ ಭಕ್ತಾದಿಗಳೆಲ್ಲ ಒಂದು ಕಲ್ಲಿನ ಸುಂದರ ಮೂರ್ತಿಯನ್ನು ಕಟೆದು ಇಟ್ಟಿದ್ದರೂ ಕೂಡಾ ಪುನಃ ಭಿನ್ನ ಆಗಿದ್ದರಿಂದ ೧೯೯೧ರಲ್ಲಿ ಕರಿಯ ಕಲ್ಲಿನಲ್ಲಿ ಕೆತ್ತಿದ ಸುಂದರ ಮೂರ್ತಿಯನ್ನು ಪ್ರತಿಷ್ಠಾಪಿಸಲಾಯಿತೆಂದು ''ರಾಚಪ್ಪ ಪೂಜಾರಿ'' ಹೇಳುತ್ತಾರೆ. ಈ ಮೂರ್ತಿಯು ೩ ಫೂಟು ಎತ್ತರ ೩ ಫೂಟು ಅಗಲ ಇದೆ. ಕಲ್ಲು ಮಣ್ಣಿನಿಂದ ಕಟ್ಟಿದ ಹಾಗೂ ಮೇಲ್ಛಾವಣಿ ಹೊಂದಿದ ಗರ್ಭಗುಡಿ ತೀರಾ ಇತ್ತೀಚಿನದು. ಈಗ ನಿತ್ಯ ತಪ್ಪದೇ ಎರಡು ಹೊತ್ತು ಪೂಜೆ ಜರುಗುತ್ತದೆ.

ಈ ದೇವಸ್ಥಾನದ ಎಡಕ್ಕೆ ಜಟ್ಟಿಂಗೇಶ್ವರನ ಗುಡಿ. ಅಲ್ಲಿಂದ ಮುಂದೆ ಬಂದರೆ ಭರಮ ದೇವರ ಕಲ್ಲಿನ ಗುಡಿ ಚಿಕ್ಕದಾಗಿ ಕಂಡುಬರುತ್ತದೆ. ದೇವಸ್ಥಾನದ ಎದುರು ವಿಶಾಲವಾದ ಕಟ್ಟೆಯಿದ್ದು, ಬೇವಿನ ಮರದ ನೆರಳಿನಲ್ಲಿ ವಿಶ್ರಾಂತಿ ತೆಗೆದುಕೊಳ್ಳಲು ಸೂಕ್ತವಾಗಿದೆ. ಕೇವಲ ೩೦೦-೪೦೦ ಹಾಲುಮತ ಸಮಾಜದ ಮನೆತನಗಳಿರುವ ಇಲ್ಲಿ ಪ್ರತಿವರ್ಷ ಶ್ರಾವಣ ಮಾಸದ ತಿಂಗಳು ಮುಗಿದು ಗಣೇಶ ಚತುರ್ಥಿ ಸಮೀಪ ಈ ದೇವರ ಜಾತ್ರೆ ಊರ ಜನರ ಮತ್ತು ಹಾಲುಮತ ಸಮುದಾಯದವರಿಂದ ಸರ್ವಧರ್ಮೀಯರ ಜಾತ್ರೆಯಾಗಿ ಜರುಗುತ್ತದೆ. ಮನಗೂಳಿ, ಸಾರವಾಡದಿಂದ ಭಕ್ತರು ತಪ್ಪದೇ ಜಾತ್ರೆಗೆ ಆಗಮಿಸಿ ಮಳೆ-ಬೆಳೆ ಹೇಳಿಕೆಯನ್ನು ಕೇಳುತ್ತಾರೆ. ಡೊಳ್ಳಿನ ಹಾಡುಗಾರಿಕೆ ರಾತ್ರಿಯಿಡೀ ನಡೆಯುತ್ತದೆ. ಇಂಡಿ ತಾಲೂಕಿನ ಮಣ್ಣೂರುದಲ್ಲಿ ವಾಸವಾಗಿರುವ ಪೂಜಾರಿಗಳು ಈ ವೇಳೆಯಲ್ಲಿ ಹೇಳಿಕೆ ಹೇಳಲು ಎಲ್ಲಿದ್ದರೂ ಬರಲೇಬೇಕು. ಬರದಿದ್ದರೆ ಈ ದೇವರು ಅವರನ್ನು ಬಿಡುವುದಿಲ್ಲ ಎಂದು ''ಕರಿಯಪ್ಪ ಪೂಜಾರಿ'' ಹೇಳುತ್ತಾರೆ. ಅಂದಿನ ದಿನವಿಡೀ ಸಜ್ಜಕದ ಪ್ರಸಾದ ನಡೆಯುತ್ತದೆ. ಒಟ್ಟಿನಲ್ಲಿ ಈ ದೇವರ ಭಕ್ತಿನಂಬಿಕೆಯಲ್ಲಿ ಇಡೀ ಊರಿನವರು ಅಷ್ಟೇ ಅಲ್ಲ ಸುತ್ತಲೂ ಹತ್ತಾರು ಹಳ್ಳಿಯವರು ಪಾಲ್ಗೊಳ್ಳುವ ಸಂಪ್ರಾದಯವಿದೆ.

**ಟಿಪ್ಪಣಿಗಳು**

೧. ಶಂ.ಭಾ. ಜೋಶಿ, ಕೃತಿ ಸಂಪುಟ-೪, ಪು.೧೯೪

೨. ಶಂ.ಭಾ. ಜೋಶಿ, ಕೃತಿ ಸಂಪುಟ-೪, ಪು.೧೯೫

೩. ಶಂ.ಭಾ. ಜೋಶಿ, ಕೃತಿ ಸಂಪುಟ-೪, ಪು.೫೦೬

೪. ಜನಪದ ಹಾಲುಮತ ಮಹಾಕಾವ್ಯ, ಲೇ. ವೀರಣ್ಣ ದಂಡೆ, ಪ್ರ-೨೦೦೦ ಪು.೧೨೨

೫. ಡಾ. ರಾ.ಚಿಂ. ಢೇರೆ - ಶ್ರೀ ವಿಠ್ಠಲ, ಒಂದು ಮಹಾಸಮನ್ವಯ, ಪು.೭೭

೬. ಡಾ. ರಾ.ಚಿಂ. ಢೇರೆ - ಶ್ರೀ ವಿಠ್ಠಲ, ಒಂದು ಮಹಾಸಮನ್ವಯ, ಪು.೭೭

೭. ಮಾಳಿಂಗರಾಯ, ಲೇಖನ ಜಿ.ಎಸ್. ವಡಗಾಂವಿ, ಜಾನಪದ ಸಾಹಿತ್ಯದರ್ಶನ - ೯, ಪು.೧೯

೮. ಶಂ.ಭಾ. ಜೋಶಿ, ಕೃತಿ ಸಂಪುಟ-೧, ಪು.೧೮೮

## ೩.೩. ಮಾಳಿಂಗರಾಯ

ನಮ್ಮ ಪ್ರಮುಖ ದೇವರುಗಳನ್ನಿಲ್ಲಿ ವೈದಿಕ, ಪೌರಾಣಿಕ ದೇವತೆಗಳು ಎಂಬುವುದಾಗಿ ಕಾಲಮಾನದ ಹಿನ್ನೆಲೆ ಆಧರಿಸಿ ವರ್ಗೀಕರಿಸಬಹುದು. ಇನ್ನೂ ಹಲವು ವಿಧಗಳ ಹಿನ್ನೆಲೆ ಆಧರಿಸಿ ನಮ್ಮಲ್ಲಿಯ ದೇವರುಗಳನ್ನು ಬೇರೆ ಬೇರೆ ಬಗೆಗಳಲ್ಲಿ ವರ್ಗೀಕರಿಸಲು ಸಾಧ್ಯತೆಯಿದೆ. ಮತ, ಧರ್ಮ, ಕುಲ, ಜಾತಿ, ಜನ ಜನಾಂಗ, ಇವುಗಳ ಹಿನ್ನೆಲೆ ಆಧರಿಸಿಕೊಂಡಿರುವ ದೇವರುಗಳು ನಮ್ಮಲ್ಲಿ ಪ್ರಾಮುಖ್ಯತೆ ಪಡೆದು ಪ್ರಸಿದ್ಧಿಯನ್ನು ಹೊಂದಿವೆ. ಈ ಬಗೆಯ ದೇವರುಗಳಲ್ಲಿಯ ಎಲ್ಲರ ಬಗ್ಗೆ ಸರಿಯಾದ ಚಾರಿತ್ರಿಕ ವಿವರಗಳಾಗಲೀ ಐತಿಹಾಸಿಕ ಮಾಹಿತಿಗಳಾಗಲೀ ದೊರೆಯುವುದಿಲ್ಲವೆಂಬುದು ಕಟು ಸತ್ಯ. ಹುಲಜಂತಿಯ ಮಾಳಿಂಗರಾಯನೂ ಈ ಬಗೆಯ ಒಬ್ಬ ದೇವನಾಗಿದ್ದಾನೆಂಬುದನ್ನು ಅವನ ಬಗ್ಗೆ ಅಧ್ಯಯನಕ್ಕೆ ನಾವು ತೊಡಗಿದಾಗ ಅರಿತುಕೊಳ್ಳುತ್ತೇವೆ. ಮಾಳಿಂಗರಾಯನು ಇಂದಿನ ಕುರುಬ ಜನಾಂಗದಲ್ಲಿಯ ಒಬ್ಬ ಪ್ರಮುಖ ದೇವರು ಮತ್ತು ಈ ಮಾಳಿಂಗರಾಯನು ಇಂದಿನ ಕುರುಬರಲ್ಲಿಯ ಅನೇಕ ಮನೆತನದವರ ಮನೆದೇವರಾಗಿದ್ದಾನೆಂಬುದು ಆ ಜನಾಂಗದ ಅಧ್ಯಯನದಿಂದ ತಿಳಿಯುತ್ತದೆ.

ಹುಲಜಂತಿ ಸಿದ್ಧ ಮಾಳಿಂಗರಾಯನು ಅದ್ಭುತ ಪವಾಡಗಳನ್ನು ಮೆರೆದ ಮಹಿಮಾವಂತನೆಂದು ನಂಬಲಾಗಿರುವ ದೇವರು. ಅಂತೆಯೇ ಅತೀ ಪ್ರಸಿದ್ಧಿಯನ್ನು ಪಡೆದಿರುವ ದೇವರಾಗಿದ್ದಾನೆ. ಈ ಸಿದ್ಧ ಮಾಳಿಂಗರಾಯದೇವರ ಮೂಲ ದೇವಸ್ಥಾನವು ಮಹಾರಾಷ್ಟ್ರದ ಸೋಲಾಪುರ ಜಿಲ್ಲೆಯ ಮಂಗಳವೇಡಾ ತಾಲೂಕಿನ ಹುಲಜಂತಿ ಗ್ರಾಮದಲ್ಲಿದೆ. ಈ ಗ್ರಾಮದ ಸುತ್ತಲೂ ಸುತ್ತುವರೆದ ಕೋಟೆಯ ದ್ವಾರಗಳಿಗೆ ಹುಲಿಯ ಚಿತ್ರಣವಿರುವುದರಿಂದ ಇದಕ್ಕೆ ಹುಲಿಮುಖದ ಅಗಸಿ ಎನ್ನುತ್ತಾರೆ. ಈ ಕೋಟೆಯ ಹತ್ತಿರದಲ್ಲೇ ದೊಡ್ಡದಾದ ಹಳ್ಳಕ್ಕೆ ''ಹಾಲಹಳ್ಳ'' ಮಾಳಿಂಗರಾಯನ ಹಳ್ಳ ''ತೀರ್ಥನದಿ'' ಎಂದು ಹಲವಾರು ಹೆಸರುಗಳಿವೆ. ಈ ಹಳ್ಳವು ಹುಟ್ಟಿದ ಸ್ಥಳದಿಂದ ಭೀಮಾನದಿಗೆ ಸಂಗಮವಾಗುವ ತನಕ ಇದರ ಅಕ್ಕಪಕ್ಕದ ದಂಡೆಗಳಲ್ಲಿ ಹಾಲುಮತ ಸಮುದಾಯದವರೇ ಹೆಚ್ಚಾಗಿ ವಾಸಿಸುತ್ತಿದ್ದಾರೆ. ಮತ್ತು ಈ ಗ್ರಾಮದ ಒಂದು ಕಿ.ಮೀ. ದೂರದಲ್ಲಿ ಮಾಳಿಂಗರಾಯನ ಗದ್ದುಗೆಯಿದೆ. ಈ ಸ್ಥಳಕ್ಕೆ ''ಬೊಬ್ಬಿಲಿವನ'' ಎಂದು ಹೆಸರು. ಆ ಗದ್ದುಗೆಯ ಮೇಲೆಯೇ ಸಪ್ತಕಳಸವನ್ನು ಹೊಂದಿದ ಮಾಳಿಂಗರಾಯನ ದೇವಾಲಯವಿದೆ. ಈ ಸ್ಥಳವು ಹಾಲುಮತ ಸಮುದಾಯದವರಿಗೆ ಪವಿತ್ರ ಸ್ಥಳವಾಗಿದ್ದು, ಹುಲಜಂತಿ ಗ್ರಾಮದಲ್ಲಿ ಮಾಳಪ್ಪನ ವಂಶಜರ ೧೫೦ಕ್ಕೂ ಹೆಚ್ಚು ಮನೆಗಳಿರುವುದರಿಂದ ಇವರಲ್ಲಿ ಯಾರಾದರೂ ಮರಣ ಹೊಂದಿದರೆ ಮಾಳಪ್ಪನ ಸಮಾಧಿಯ ಆವರಣದಲ್ಲಿಯೇ ಸಂಸ್ಕಾರ ಮಾಡುತ್ತಾ ಬಂದಿದ್ದರಿಂದ ಆ ಸ್ಥಳದಲ್ಲಿ ಸುಮಾರು ೨೫೦ಕ್ಕೂ ಹೆಚ್ಚು ಪೂಜಾರಿಗಳ ಸಮಾಧಿಗಳಿವೆ. ಮತ್ತು ಸಮಾಧಿಯ ಪೂರ್ವದಲ್ಲಿ ಮಾಳಪ್ಪನು ಕುರಿಗಳನ್ನು ನಿಲ್ಲಿಸುತ್ತಿದ್ದ (ಕುರಿಹಟ್ಟಿ) ಸ್ಥಳಕ್ಕೆ ಬಂದವರು ಈ ಜಾಗದಲ್ಲಿ ಅಗೆದು ಕುರಿಹಿಕ್ಕಿ ಹುಡುಕಾಡುವ ಪರಿಕಲ್ಪನೆ ರೂಢಿಯಲ್ಲಿದೆ. ಹಿಕ್ಕಿಗಳು ಸಿಕ್ಕಿದರೆ ಲಕ್ಷ್ಮೀ ಸಿಕ್ಕ ಹಾಗೇ ಎಂದು ತಮ್ಮ ಮನೆಗಳಿಗೆ ತೆಗೆದುಕೊಂಡು ಹೋಗಿ ಜಗುಲಿಯ ಮೇಲಿಟ್ಟು ಪೂಜೆಯನ್ನು ಮಾಡುತ್ತಾರೆ.[೧]

ಪ್ರತಿವರ್ಷ ದೀಪಾವಳಿ ಸಮಯದಲ್ಲಿ ಜರುಗುವ ಈ ದೇವರ ಜಾತ್ರೆಯ ಸನ್ನಿವೇಶದಲ್ಲಿ ಕರ್ನಾಟಕ, ಆಂಧ್ರ, ಮಹಾರಾಷ್ಟ್ರ ರಾಜ್ಯಗಳಲ್ಲಿಯ ಭಕ್ತರು ಅಗಣಿತ ಸಂಖ್ಯೆಯಲ್ಲಿ ಸೇರುತ್ತಾರೆ. ದೀಪಾವಳಿ ಅಮಾವಾಸ್ಯೆಯ ದಿನದ ನಡುರಾತ್ರಿ ಸಮಯದ ಕಗ್ಗತ್ತಲಲ್ಲಿ ಕೈಲಾಸದಿಂದ ಪರಶಿವನೇ ಪ್ರತ್ಯಕ್ಷ ಭೂಮಿಗಿಳಿದು ಬಂದು ಮಾಳಿಂಗರಾಯನ ದೇವಸ್ಥಾನದ ಶಿಖರಗಳಿಗೆ ಮುಂಡಾಸ ಸುತ್ತಿ ಹೋಗುತ್ತಾನೆಂದು ಮಾಳಿಂಗರಾಯನ ಭಕ್ತರಲ್ಲಿ

ಗಾಢವಾದ ಪವಿತ್ರ ನಂಬಿಕೆ ಇಂದಿನ ವೈಜ್ಞಾನಿಕ ಯುಗದಲ್ಲಿಯೂ ಗಟ್ಟಿಯಾಗಿರುವುದರ ಹಿನ್ನೆಲೆ ಈಗಂತೂ ಹುಲಜಂತಿಯು ಪುಣ್ಯಕ್ಷೇತ್ರ ಎಂಬುವುದಾಗಿ ಪ್ರಖ್ಯಾತಿ ಪಡೆದಿದೆ. ಶ್ರದ್ಧಾಪೂರ್ಣ, ಭಕ್ತಿಪೂರ್ಣ, ಅಚಲ ನಂಬಿಕೆಯ ಆಕರ್ಷಣೆಯ ಗುಟ್ಟೇ ಮಾಳಿಂಗರಾಯನ ಮಹಿಮೆಗೆ ಮೂಲ ಕಾರಣವಾಗಿದೆ.

ಮಾಳಿಂಗರಾಯನ ಪೂರ್ವಜರ ವಂಶಾವಳಿಯ ಪ್ರಕಾರ ಇವರ ಬೆಡಗು ಮಾಶಾಳ (ಅಫಜಲಪೂರ ತಾಲೂಕಿನ ಭೀಮಾತೀರದ ಗ್ರಾಮ) ಗೌಡಲದವರು. ಅಲ್ಲಿಂದ ಇವರ ಪೂರ್ವಜರು ಕಾಶೀಖಂಡಕ್ಕೆ ಬಂದು ಅಲ್ಲಿಂದ ಬಾರಾಮತಿ (ಪುಣೆಯ ಜಿಲ್ಲೆಯ ತಾಲೂಕು ಕೇಂದ್ರ) ಇಲ್ಲಿ ಗೌಡಕಿಗೆ ಬಂದರೆಂದು ತಿಳಿದುಬರುತ್ತದೆ ಇವರ ಮೂಲ ಪುರುಷ:




ಹೀಗೆ ತುಕ್ಕಪ್ಪರಾಯ ಮತ್ತು ಕಣಾಬಾಯಿಗೆ ಜಕ್ಕಪ್ಪ, ಮಾಳಪ್ಪರು ಹುಟ್ಟುತ್ತಾರೆ.

ಸ್ವಾಮಿರಾಯ ಮತ್ತು ತುಕ್ಕಪ್ಪರಾಯರು ''ತೇರಾಮತಿ ಮತ್ತು ಬಾರಾಮತಿ'' ಪ್ರದೇಶಗಳ ಆಳ್ವಿಕೆ ಮಾಡುತ್ತಿದ್ದ ಸಮಯದಲ್ಲಿ ಗುರು ಗೋರಖನಾಥನ ಕರಪತ್ರದ ಬೇಡಿಕೆಯ ಮೇರೆಗೆ ಆಡಳಿತವನ್ನು ಬಿಟ್ಟು ''ಕಿಲಾರಿ''ಗಳನ್ನು ಕಾಯುವುದಕ್ಕೆ ಆರಂಭಿಸಿದರು. ಅಲೆಮಾರಿಗಳಾಗಿ ಪಶುಪಾಲನೆಯೇ ನಮ್ಮ ಗುರುವಿನ ಸೇವೆಯೆಂದು ನಂಬಿ ತಮಗೆ ದೊರೆತ-ದೊರೆತನವನ್ನು ಬಿಟ್ಟು ಪಶುಪಾಲನೆಯನ್ನು ಆಯ್ಕೆಮಾಡಿಕೊಂಡಿದ್ದರ ಬಗೆಗೆ ಸಾಕಷ್ಟು ಉದಾಹರಣೆಗಳಿವೆ. ಆ ಕಾಲಕ್ಕೆ ಪಶುಪಾಲನೆಯೆನ್ನುವುದು ದೊರೆತನಕ್ಕಿಂತಲೂ ಶ್ರೇಷ್ಠವೃತ್ತಿಯಾಗಿತ್ತು.[೩]

ಪ್ರಾಚೀನ ಭಾರತದಲ್ಲಿ ಋಷಿಗಳು ಮತ್ತು ರಾಜರು ಸಹ ಪಶುಪಾಲಕರಾಗಿದ್ದರು. ರಾಜನು ಎಷ್ಟು ಹಸುಗಳನ್ನು ಸಾಕಿದ್ದಾನೆಂಬುದರ ಮೇಲೆ ಆತನ ಆರ್ಥಿಕ ಸಂಪತ್ತು ಸಾಮಾಜಿಕ ಸ್ಥಾನಮಾನಗಳು ನಿರ್ಧಾರವಾಗುತ್ತಿದ್ದವು. ಹಸುಗಳು ತಮ್ಮ ಶ್ರೀಮಂತಿಕೆಯ ಪ್ರತೀಕವೆಂದು ತಿಳಿದುಕೊಂಡಿದ್ದರು. ಹಾಲುಮತದವರು ಮಾಂಸಾಹಾರ ಸೇವಿಸಬಾರದೆಂಬ ಕಾರಣಕ್ಕಾಗಿ ಅವರು ಆಹಾರಕ್ಕಾಗಿ ಪಶುಗಳನ್ನು ಕೊಲ್ಲುತ್ತಿರಲಿಲ್ಲ.''[೪]

ಸೋಮರಾಯ ಮತ್ತು ತುಕ್ಕಪ್ಪರಾಯ ಅಣ್ಣ-ತಮ್ಮಂದಿರು ದನಗಳನ್ನು ಮೇಯಿಸುತ್ತಾ ''ಹಾಲಹರವಿ'' ಗ್ರಾಮದ ಹತ್ತಿರ ಶಾನಭೋಗರ ಗುಡ್ಡಕ್ಕೆ ಹೋಗಿ ಹಟ್ಟಿಯಲ್ಲಿದ್ದುತ್ತಿದ್ದರು. ಸೋಮರಾಯ ಒಬ್ಬನೇ ಇದ್ದಾಗ ಏಳನೂರು ಜನ ಬೇಡರು ದನಗಳನ್ನು ಓಡಿಸಿಕೊಂಡು ಹೋದರು. ಒಂದು ಗೂಳಿ ತಪ್ಪಿಸಿಕೊಂಡು ಹಾಲಹರವಿಗೆ

ಹೋಗಿ ಅಂಬಾ ಎಂದು ಕೂಗುತ್ತದೆ. ದನದ ಸಂಕೇತದ ಮೇಲೆ ತುಕ್ಕಣ್ಣರಾಯನು ಮಕ್ಕಳಾದ ಮಾಳಪ್ಪ ಜಕ್ಕಪ್ಪರನ್ನು ಕರೆದುಕೊಂಡು ಹೋಗಿ ನೋಡಲು ಸೋಮರಾಯ ತನ್ನ ಧನಸ್ಸಿನಿಂದ ತಾನೇ ಬಾಣವನ್ನು ಹೊಡೆದುಕೊಂಡು ಸಾಯುವ ಸ್ಥಿತಿಯಲ್ಲಿದ್ದನು, ಬಾಣ ತೆಗೆಯಲು ಹೋದಾಗ ಸೋಮರಾಯ ''ಏಳುನೂರು ಮಂದಿ ಬೇಡರನ್ನು ಕೊಂದು ಸೇಡು ತೀರಿಸಿಕೊಳ್ಳುವುದಾದರೆ. ಬಾಣವನ್ನು ಕೀಳಿರಿ'' ಎನ್ನುತ್ತಾನೆ. ಮಾಳಪ್ಪ-ಜಕ್ಕಪ್ಪರು ದೊಡ್ಡಪ್ಪನಿಗೆ ವಚನ ಕೊಟ್ಟು ಅದರಂತೆ ಪ್ರತಿಜ್ಞೆಯನ್ನು ಪೂರೈಸುತ್ತಾರೆ."

ಇನ್ನೊಂದು ಪ್ರತೀತಿಯ ಪ್ರಕಾರ ಮಾಳಿಂಗರಾಯನು ಇಂಡಿ ತಾಲೂಕಿನ ''ಅಂಜುಟಗಿ'' ಗ್ರಾಮದವನಾಗಿದ್ದಾನೆಂಬ ಮಾತು ಬರುತ್ತದೆ. ಈ ಗ್ರಾಮದಲ್ಲಿ ಮಾಳಿಂಗರಾಯನ ದೇವಸ್ಥಾನವು ಸುಮಾರು ೭೦೦ ವರ್ಷಗಳ ಹಿಂದೆ ಕಟ್ಟಲಾಗಿದೆ. ಇಲ್ಲಿ ಒಬ್ಬ ಪೂಜಾರಿಯು ಕುರಿಗಳನ್ನು ಮೇಯಿಸುತ್ತಾ ಕುಳಿತಿರುವಾಗ ಅಲ್ಲಿಗೆ ಒಬ್ಬ ವ್ಯಕ್ತಿ ಬರುತ್ತಾನೆ. ತನ್ನ ಕುರಿಗಳು ಸಾಯುತ್ತಿವೆ. ಮತ್ತು ಮನೆಯಲ್ಲಿ ಹಲವಾರು ತೊಂದರೆಗಳಿಂದ ಬಳಲುತ್ತಿದ್ದೆನೆಂದು ಹೇಳಿಕೊಂಡಾಗ ಪೂಜಾರಿಯು ಅವನಿಗೆ ಭಂಡಾರವನ್ನು ಕೊಟ್ಟು ಇದನ್ನು ತೆಗೆದುಕೊಂಡು ನಿನ್ನ ಕುರಿಗಳಿಗೆ ಹಚ್ಚಿ ಮನೆಯ ಜಂತಿಗೆ (ತೊಲೆಗೆ) ಕಟ್ಟು ಎಂದನು. ಪೂಜಾರಿ ಹೇಳಿದಂತೆ ಮಾಡಿದಾಗ ಅವನಿಗೆ ಎಲ್ಲ ರೀತಿಯಿಂದಲೂ ಒಳ್ಳೆಯದಾಗುತ್ತಾ ಬಂದಿತು. ಮುಂದೆ ಆ ವ್ಯಕ್ತಿ ತನ್ನ ಮಗಳನ್ನು ಪೂಜಾರಿಗೆ ಕೊಟ್ಟು ಮದುವೆ ಮಾಡಿದ. ಈ ಸಂಬಂಧದಿಂದಾಗಿ ಎಲ್ಲ ಹಿರಿಯರು ಕೂಡಿಕೊಂಡು ''ಪ್ರಭುಲಿಂಗ'' ಎಂಬ ದೇವಸ್ಥಾನವನ್ನು ನಿರ್ಮಿಸತೊಡಗಿದಾಗ ಗುಡಿಯ ಪಾಯವು ಎಷ್ಟು ಬಾರಿ ಕಟ್ಟಿದರೂ ನಿಲ್ಲುತ್ತಿರಲಿಲ್ಲ. ಎಲ್ಲಾ ಜನರು ನಿರಾಶೆಗೊಳಗಾಗಿ ಕುಳಿತಿರುವಾಗ ಪೂಜಾರಿಯ ಕನಸಿನಲ್ಲಿ ಪ್ರಭುಲಿಂಗ ದೇವರು ಬಂದು ನಿನ್ನ ಹೆಂಡತಿಯ ಹೊಟ್ಟೆಯಲ್ಲಿ ಜನಿಸುವ ಕೂಸನ್ನು ನನ್ನ ಗುಡಿಗೆ ಆಹುತಿಕೊಟ್ಟರೆ ಆ ಕಟ್ಟಡ ಪೂರ್ಣವಾಗುತ್ತದೆಂದು ಹೇಳಿದನು. ಮತ್ತು ಹುಟ್ಟಿದ ಕೂಸಿಗೆ ''ಮಾಳಪ್ಪ''ನೆಂದು ನಾಮಕರಣ ಮಾಡಬೇಕೆಂದಾಗ ಅದಕ್ಕೆ ಪೂಜಾರಿಯು ಒಪ್ಪಿ ಕೆಲವು ತಿಂಗಳುಗಳ ನಂತರ ಹುಟ್ಟಿದ ಕೂಸನ್ನು ಪಾಯದಲ್ಲಿ ಹಾಕಿದಾಗ ಕಟ್ಟಡ ಪೂರ್ಣಗೊಂಡಿತು. ಮುಂದೆ ಅದೇ ದೇವಸ್ಥಾನಕ್ಕೆ ''ಮಾಳಪ್ಪ''ನ ದೇವಸ್ಥಾನವೆಂಬ ಹೆಸರು ರೂಢಿಯಾಯಿತು. ಹೀಗೆ ಈ ಅಂಜುಟಗಿ ಗ್ರಾಮದಲ್ಲಿಯೂ ಕೂಡಾ ಮಾಳಿಂಗರಾಯನು ಹುಟ್ಟಿದ ಬಗೆಯ ಇತಿಹಾಸವನ್ನು ಇಲ್ಲಿನ ಸ್ಥಳೀಯರು ಹೇಳುತ್ತಾರೆ.

**ಮಾಳಿಂಗರಾಯ ಮತ್ತು ಜಕ್ಕಪ್ಪ ಮಾಡಿದ ಪವಾಡಗಳು**

ಸೋಮರಾಯನಿಗೆ ವಚನ ಕೊಟ್ಟಂತೆ ಬೇಡರ ಉಪಟಳವನ್ನು ಕೊನೆಗಾಣಿಸುತ್ತಾರೆ. ಔದ್ಯೋಗೀಕರಣದ ಅಂಕುರವಾಗದ ಆ ಕಾಲದಲ್ಲಿ ಕೃಷಿಯೇ ಉಪಜೀವನದ ಏಕಮುಖ ದಾರಿಯಾಗಿತ್ತು. ಜಾನುವಾರುಗಳು ಪ್ರಮುಖ ಆಸ್ತಿ-ಪಾಸ್ತಿ, ಅವುಗಳ ಅಪಹರಣ ಸರ್ವೇಸಾಮಾನ್ಯ, ಗುಡ್ಡಗಾಡುಗಳಲ್ಲಿ ಲೂಟಿ, ದರೋಡೆ, ಹೆಚ್ಚಾಗಿ ಮುಗ್ಧ ಜನತೆಯ ಉಪಜೀವನ ಕಷ್ಟಕರವಾಗಿರಬಹುದು. ಅಂಥ ಸಾಮಾಜಿಕ ಪರಿಸರದಲ್ಲಿ ಈ ಧೀರರು ಶೋಚನೀಯ ಪರಿಸ್ಥಿತಿಯನ್ನು ಹತೋಟಿಗೆ ತಂದು ಜನ ಸಾಮಾನ್ಯರ ಆರಾಧ್ಯದೇವತೆಗಳಾದರು. ಸೋದರನಾದ ಜಕ್ಕಪ್ಪನ ಜೊತೆಗೆ ಬೇಡರ ಗುಂಪನ್ನು ಚೆಂಡಾಡಿ ''ಉಮದಿ'' ಗ್ರಾಮದಲ್ಲಿ ರುಂಡಗಳನ್ನು ರಾಶಿ ಹಾಕಿ ಚಕ್ರಕಟ್ಟೆಯನ್ನು ಕಟ್ಟಿದನು."

ಹುಲಜಂತಿ ಮಾಳಿಂಗರಾಯನನ್ನು ಪವಾಡ ಪುರುಷನನ್ನಾಗಿ ಮಾಡಿದ ಮತ್ತೊಂದು ಪ್ರಸಂಗವೆಂದರೆ, ಆತನ ಗುರು ಬೀರಪ್ಪನ ಆದೇಶದಂತೆ ಹುಲಿಯ ಗಿಣ್ಣದ ಹಾಲನ್ನು ತಂದದ್ದು. ಸಾಮಾನ್ಯವಾಗಿ ಹಸಿವೆಯಿಂದ ಬಳಲಿದ ಹುಲಿಗಿಂತಲೂ ಮರಿಹಾಕಿದ ಹುಲಿಯು ಹೆಚ್ಚು ಅಘಾತಕಾರಿ. ಇಂಥ ಹುಲಿಯ ಮೊಲೆಯನ್ನು ಕರೆದು,

ಗುರುವಿಗಾಗಿ ಗಿಣ್ಣದ ಹಾಲನ್ನು ತಂದ ಮಾಳಿಂಗರಾಯನ ಧೈರ್ಯ ಸಾಹಸ ಒಂದು ಕಡೆಯಾದರೆ, ಇನ್ನೊಂದು ಕಡೆಗೆ ಕ್ರೂರ ಮೃಗಗಳನ್ನು ತನ್ನ ವಶ ಮಾಡಿಕೊಳ್ಳುವಂತಹ ಅಗಾಧ ಲೌಕಿಕ ಶಕ್ತಿಯನ್ನು ಹೊಂದಿದ್ದಕ್ಕಾಗಿ ಅವನೊಬ್ಬ ಪವಾಡ ಪುರುಷನಾಗಿ ಗ್ರಾಮೀಣ ಜನರ ಆರಾಧ್ಯ ದೈವವಾಗಿ ರೂಪಾಂತರಗೊಂಡನೆಂದು ಹೇಳಬಹುದು. ಹುಲಿಯ ಗಿಣ್ಣದ ಹಾಲನ್ನು ಹಿಂಡಿ ಹುಲಿಯ ಮರಿಗಳನ್ನು ಎತ್ತಿಕೊಂಡು ಬಂದು ಹುಲಿಯ ಜಯಂತಿಯನ್ನು ಆಚರಿಸಿದ್ದಕ್ಕಾಗಿ ಮಾಳಿಂಗರಾಯ ನೆಲೆಸಿದ ಗ್ರಾಮಕ್ಕೆ ''ಹುಲಿಯ ಜಯಂತಿಪುರ'' ಎಂಬ ಹೆಸರು ಬಂದಿರುವುದಾಗಿ ಅಡಿವೆಪ್ಪ ಮಹಾರಾಜರು ತಮ್ಮ ಗ್ರಂಥವಾದ ''ಮಾಳಿಂಗರಾಯ ಪುರಾಣ''ದಲ್ಲಿ ಉಲ್ಲೇಖಿಸಿದ್ದಾರೆ. ಈ ಗ್ರಾಮದ ಪೂರ್ವನಾಮ ''ಜಾಗೃತಿಪುರ'' ಮಾಳಿಂಗರಾಯನ ಪವಾಡದಿಂದ ಹುಲಜಂತಿ ಎಂಬ ಹೆಸರು ಪ್ರಾಪ್ತವಾಗಿದೆ.[5]

**ಶೀಲವಂತಿಯನ್ನು ಸೋಲಿಸಿದ್ದು**

ಮಾಳಿಂಗರಾಯನ ತಪೋಭಂಗ ಮಾಡಲು ವೀಳ್ಯೆಯತ್ತಿದ ಶೀಲವಂತಿ ತಾನೇ ಸೋಲುತ್ತಾಳೆ. ಅದು ಪ್ರಭುದೇವ ಮಾಯಾವತಿಯರ ಕಥಾ ಸಂದರ್ಭವನ್ನು ನೆನಪಿಗೆ ತರುತ್ತದೆ. ಹುಲಜಂತಿ ಗ್ರಾಮವು ಮಾಳಪ್ಪನಿಗೆ ನೆಲೆಯಾದಂತೆ, (ಸಿಡಿಯಾಣ) ಶಿರಾಡೋಣವು ಶೀಲವಂತಿಗೆ ನೆಲವಾಗಿ ಬಿಡುವುದು.

''ಅಂತು ಮಾಳಪ್ಪನ ಸ್ವಂತೋಗಿ
ತರತೀನ ದೀಡ ತಾಸಿನಲ್ಲಿ (ಪಾರ್ವತಿ)
ಹ್ವಾದರ ಅಲ್ಲಿ ಬರುದಿಲ್ಲ ಇಲ್ಲೆ - (ಪರಮೇಶ್ವರಿ)
ಬಂಡಿ ಹೊಡೆದರಾಗೋ
ಮಾಳಪ್ಪ ಭಗತಿವಾನ ಭವದಾಗೋ
ಬಂಡಿಯ ಗಾಲಿ ತುಂಡಾಗಿ ಬಿದ್ದಾವೋ
ಮುತ್ತಲ ಮೋರಿ ಹಳದಾಗೋ''[6]

ಶೀಲವಂತಿಯ ಮೂಗುತಿ ಹಳ್ಳದಲ್ಲಿ ಕಳೆದಾಗ ಅವಳು ಅದನ್ನು ಹುಡುಕಾಡುವಾಗ ನಿನ್ನ ಉಡಿಯಲ್ಲಿದೆ ಎಂದು ಮಾಳಪ್ಪನು ಅಂದಾಗ ಶೀಲವಂತಿ ಸೋತು ಸಿಡಿಯಾಣದಲ್ಲಿಯೇ ಉಳಿಯುತ್ತಾಳೆ. ಮಾಳಿಂಗರಾಯನು ''ಸಿರಾಡೋಣ'' (ತಾ. ಇಂಡಿ) ಗ್ರಾಮದಲ್ಲಿ ಡೊಳ್ಳು, ತಾಳ, ಜಾಗಟೆ ಇವುಗಳನ್ನು ಬಾರಿಸುತ್ತಾ ಬೀರಪ್ಪನ ಸೇವೆ ಮಾಡುತ್ತಿದ್ದನು. ಇವುಗಳ ಸಪ್ಪಳ ಶಿವ - ಪಾರ್ವತಿಯರಿಗೆ ಗೊತ್ತಾಗಿ ಕೈಲಾಸದಿಂದ ರೂಪಧಾರಣ ಮಾಡಿಕೊಂಡು ಮಾಳಪ್ಪನ ಮುಂದೆ ಪ್ರತ್ಯಕ್ಷನಾಗಿದ್ದರೂ ಸಹ ಅವರನ್ನು ಗುರ್ತು ಹಿಡಿದು ಉಪಚರಿಸಿದನು. ಪಾರ್ವತಿಯ ಕೋರಿಕೆಯ ಮೇರೆಗೆ ಕೈಯಲ್ಲಿದ್ದ ಅಲಗವನ್ನು ತನ್ನ ಹೊಟ್ಟೆಗೆ ಚುಚ್ಚಿಕೊಳ್ಳುತ್ತಾ ಮತ್ತು ಚುಚ್ಚಿದ ಜಾಗದಲ್ಲಿ ಭಂಡಾರವನ್ನು ಹಚ್ಚಿಕೊಳ್ಳುತ್ತಾ ಅಲಗಿನ ಆಟವನ್ನು ಆಡಿ ಶಿವನನ್ನು ಮೆಚ್ಚಿಸಿದನು. ನಿನಗೇನು ವರಬೇಕೆಂದು ಶಿವನು ಕೇಳಿದಾಗ, ಅದಕ್ಕೆ ಮಾಳಿಂಗರಾಯನು ''ಬಡವರಿಗೆ ಭಾಗ್ಯದೊರಕಲಿ, ನನಗೆ ಬಡತನವಿರಲಿ'' ಎಂದು ಕೇಳಿ ಮತ್ತು ಪ್ರತಿವರ್ಷ ದೀಪಾವಳಿಯ ಅಮಾವಾಸ್ಯೆಯ ಮಧ್ಯರಾತ್ರಿ ಸಮಯದ ಕತ್ತಲಿನಲ್ಲಿ ಕೈಲಾಸದಿಂದ ಬಂದು ನನ್ನ ಶಿರಕ್ಕೆ ''ಮುಂಡಾಸ''ವನ್ನು ಸುತ್ತಿ ಭೇಟಿಯಾಗಬೇಕೆಂದನು.

**ಜಾತ್ರೆ**

ಹುಲಜಂತಿಯಲ್ಲಿ ಪ್ರತಿವರ್ಷ ದೀಪಾವಳಿಯ ಅಮಾವಾಸ್ಯೆಗೆ ಸಾಕ್ಷಾತ್ ಪರಶಿವನೇ ಬಂದು ಮಾಳಪ್ಪನಿಗೆ ''ಮುಂಡಾಸ'' ಸುತ್ತುತ್ತಾನೆಂದು ಇಲ್ಲಿನ ಭಕ್ತಾದಿಗಳು ನಂಬಿದ್ದಾರೆ. ಅದೇ ರೀತಿಯಾಗಿ ಇಂಡಿ ತಾಲೂಕಿನ

''ಅಂಜುಟಗಿ'' ಗ್ರಾಮದಲ್ಲಿನ ಮಾಳಪ್ಪನ ಜಾತ್ರೆಯು ಪ್ರತಿ ಮೂರು ವರ್ಷಕ್ಕೊಮ್ಮೆ ನಡೆಯುತ್ತದೆ. ಇಲ್ಲಿನ ಜನರು ಇದಕ್ಕೆ ''ಹಿರಿಹಬ್ಬ'' ಎಂದು ಕರೆಯುತ್ತಾರೆ. ಈ ಗ್ರಾಮದ ಜಾತ್ರೆಯು ''ಬಾದಾಮಿ'' ಅಮಾವಾಸ್ಯೆಗೆ ನಡೆಯುವುದು. ಇಲ್ಲಿ ಸುತ್ತಮುತ್ತಲಿನ ಐದು ಗ್ರಾಮಗಳಿಂದ ಪಲ್ಲಕ್ಕಿಗಳು ಆಗಮಿಸಿ ಗುಗ್ಗಳಕಾರ್ಯ, ಹೋಮ ಸುಡುವುದು. ಪ್ರಸಾದದ ನೈವೇದ್ಯ ಹೀಗೆ ಎಲ್ಲ ಕಾರ್ಯಕ್ರಮಗಳು ನಡೆದ ಬಳಿಕ ಬೃಹತ್ತ ಪ್ರಮಾಣದಲ್ಲಿ ನೂರಾರು ಜೋಡಿಗಳಿಗೆ ಸಾಮೂಹಿಕ ವಿವಾಹವನ್ನು ಮಾಡಿಸಿ ಜಾತ್ರೆಯ ಸಮಾಪ್ತಿಯನ್ನು ಕರಿಹರಿಯುವ ಮೂಲಕ ಕೊನೆಗೊಳಿಸುತ್ತಾರೆ.

ಅದೇ ರೀತಿಯಾಗಿ ಇಂಡಿ ಪಟ್ಟಣದಲ್ಲಿಯೂ ಮಾಳಪ್ಪನು ೧೨ನೇ ಶತಮಾನದಲ್ಲಿ ಈ ಪಟ್ಟಣಕ್ಕೆ ಬಂದು ಹೋಗಿದ್ದಾನೆಂದು ಇಲ್ಲಿನ ಸ್ಥಳೀಯರು ಹೇಳಿದ್ದಾರೆ. ಈಚೆಗೆ ಹೊಸ ದೇವಸ್ಥಾನವನ್ನು ಕಟ್ಟಿಸಿ ಯುಗಾದಿ ಅಮಾವಾಸ್ಯೆಗೆ ಮಾಳಿಂಗರಾಯನ ಪಲ್ಲಕ್ಕಿ ಉತ್ಸವವು ಮೆರವಣಿಗೆಯೊಂದಿಗೆ ಆಚರಿಸುವರು. ಇತರ ಹಾಲುಮತ ದೇವಸ್ಥಾನಗಳಂತೆ ಅಲಗ ಹಾಯುವುದು. ವಾಲಗ, ಇನ್ನಿತರ ಕಾರ್ಯಕ್ರಮಗಳನ್ನು ಮಾಡಿ, ಕರಿಹರಿಯುವ ಮೂಲಕ ಜಾತ್ರೆಯನ್ನು ಮುಕ್ತಾಯಗೊಳಿಸುವರು.

ಪವಾಡ ಪುರುಷನಾದ ಮಾಳಿಂಗರಾಯನ ದೇವಸ್ಥಾನಗಳು ಕಡಿಮೆ ಇದ್ದರೂ ಪ್ರತಿಯೊಂದು ಗ್ರಾಮದಲ್ಲಿ ಡೊಳ್ಳಿನ ಮೇಳದವರು ಮಾಳಿಗರಾಯ ಮತ್ತು ಬೀರೇಶ್ವರನ ಚರಿತ್ರೆಯನ್ನೇ ಹಾಡುತ್ತಾರೆ. ಅವರು ಯಾವುದೇ ದೇವರ ಹೆಸರಿನಲ್ಲಿ ಡೊಳ್ಳಿನ ಸಂಘಕ್ಕೆ ಹೆಸರಿಟ್ಟರೂ, ಇವರು ಹಾಡುವುದು ಮಾತ್ರ ಮಾಳಪ್ಪ, ಬೀರಪ್ಪನ ಇತಿಹಾಸವನ್ನೇ ಎಂದು ಹೇಳಬಹುದು.

**ಟಿಪ್ಪಣಿಗಳು**

೧. ಮಾಳಿಂಗರಾಯ ಮಹಾಕಾವ್ಯ, (ಸಂ), ಗಂಗಾಧರ ದೈವಜ್ಞ, ಪು. ೬

೨. ಲಕ್ಷ್ಮಣ ಮಲ್ಲಪ್ಪ ಹೆಳವರ, ಗ್ರಾಮ ಪರಮಾನಂದವಾಡಿ, ತಾ.ರಾಯಬಾಗ, ಜಿ. ಬೆಳಗಾಂವ. ಇವರಲ್ಲಿರುವ ಪ್ರಾಚೀನ ವಂಶಾವಳಿ ದಾಖಲೆಯಿಂದ ಸಂಗ್ರಹಿಸಲಾಗಿದೆ.

೩. ಗಂಗಾಧರ ದೈವಜ್ಞ (ಸಂ), ಮಾಳಿಂಗರಾಯ ಮಹಾಕಾವ್ಯ, ಪುಟ. ೧೬

೪. Hers Souites meuille - culturel Anthropalogy ಪು. ೩೩೦

೫. ಜಾನಪದ ಸಾಹಿತ್ಯ ದರ್ಶನ ೯ ಮಾಳಿಂಗರಾಯ ಲೇಖನ ಜಿ.ಎಸ್. ವಡಗಾವಿ, ಪು. ೧೧೨

೬. ಲಕ್ಷ್ಮಣ ಮಲ್ಲಪ್ಪ ಹೆಳವರ, ಗ್ರಾಮ ಪರಮಾನಂದವಾಡಿ, ತಾ.ರಾಯಬಾಗ, ಜಿ. ಬೆಳಗಾಂವ. ಇವರಲ್ಲಿರುವ ಪ್ರಾಚೀನ ವಂಶಾವಳಿ ದಾಖಲೆಯಿಂದ ಸಂಗ್ರಹಿಸಲಾಗಿದೆ.

೭. ಜಾನಪದ ಸಾಹಿತ್ಯ ದರ್ಶನ-೯ ಮಾಳಿಂಗರಾಯ ಲೇಖನ ಜಿ.ಎಸ್. ವಡಗಾವಿ, ಪುಟ. ೧೧೪

೮. ಜಾನಪದ ಸಾಹಿತ್ಯ ದರ್ಶನ-೯ ಮಾಳಿಂಗರಾಯ ಲೇಖನ ಜಿ.ಎಸ್. ವಡಗಾವಿ, ಪುಟ. ೧೧೫

೩.೪. ರೂಗಿಯ ಜಟ್ಟಿಂಗೇಶ್ವರ

ಬಿಜಾಪೂರ ಜಿಲ್ಲೆಯ ಇಂಡಿ ತಾಲೂಕಿನ ''ಹಿರೇರೂಗಿ'' ಎಂಬ ಗ್ರಾಮದಲ್ಲಿ ಭಕ್ತರ ಕಾಮಧೇನು ಎಂದು ಹೆಸರುವಾಸಿಯಾದ ಶ್ರೀ ಜಟ್ಟಿಂಗೇಶ್ವರರು ಒಬ್ಬರು. ಇಲ್ಲಿಯವರೆಗೆ ಜಟ್ಟಿಂಗೇಶ್ವರನ ಬಗ್ಗೆ ಯಾವುದೇ ಲಿಖಿತ ಆಕರಗಳಿಲ್ಲ. ಆದರೆ ಡೊಳ್ಳಿನ ಹಾಡುಗಳಲ್ಲಿ ಜಟ್ಟಿಂಗೇಶ್ವರನ ಬಗ್ಗೆ ಅಲ್ಪ-ಸ್ವಲ್ಪ ಮಾಹಿತಿಗಳಿವೆ. ಪುರಾತನ ಕಾಲದಿಂದಲೂ ಶ್ರೀ ಜಟ್ಟಿಂಗೇಶ್ವರನ ದೇವಸ್ಥಾನದಿಂದ ಹಿರೇರೂಗಿ ಎಂಬ ಗ್ರಾಮ ಪ್ರಸಿದ್ಧಿಯನ್ನು ಪಡೆದಿದೆ. ದಕ್ಷಿಣ ಕರ್ನಾಟಕದ ಮಲೆನಾಡಿನ ಕಡೆಯವರು ಅಂದರೆ ಶಿವಮೊಗ್ಗ ಜಿಲ್ಲೆಯ ಕಡೆಯವರು ವ್ಯಾಪಾರಕ್ಕಾಗಿ ಬಿಜಾಪೂರಕ್ಕೆ ಬರುತ್ತಿದ್ದರು. ಈ ವ್ಯಾಪಾರ ವೃತ್ತಿಯನ್ನು ಅನುಸರಿಸಿಕೊಂಡು ಬಂದವರು. ''ಬಣಜಿಗ'' ಸಮಾಜದವರಿದ್ದರು. ಈಗಿನ ಕಾಲದಲ್ಲಿರುವಂತೆಯೇ ತಕ್ಕಡಿಯು ತೂಕದ ಕಲ್ಲುಗಳು ಆಗಿನ ಕಾಲದಲ್ಲಿ ಇರುತ್ತಿರಲಿಲ್ಲ. ಆಗಿನ ಕಾಲದಲ್ಲಿ ಯಾವುದೋ ಕೆಲವೊಂದು ಕಲ್ಲುಗಳನ್ನು ತಕ್ಕಡಿಯಲ್ಲಿ ಇಟ್ಟು ತಮ್ಮ ವಸ್ತುಗಳನ್ನು ತೂಕಮಾಡಿಕೊಡುತ್ತಿದ್ದರು. ಅಂತಹ ಒಂದು ಸಂದರ್ಭದಲ್ಲಿ ವ್ಯಾಪಾರಿಗಳಿಗೆ ಆ ತೂಕದ ಕಲ್ಲಿನಿಂದ ಕೆಲವೇ ವರ್ಷಗಳಲ್ಲಿ ಬಹಳಷ್ಟು ಲಾಭವಾಗತೊಡಗಿತು. ವ್ಯಾಪಾರಿಗಳಿಗೆ ಲಾಭ ಹೆಚ್ಚಿದಂತೆಲ್ಲಾ ತಮ್ಮ ತೂಕದಲ್ಲಿ ಮೋಸವನ್ನು ಮಾಡಿ ಕಡಿಮೆ ವಸ್ತುಗಳನ್ನು ಗ್ರಾಹಕರಿಗೆ ಕೊಟ್ಟು ಹೆಚ್ಚಿಗೆ ಹಣವನ್ನು ವಸೂಲು ಮಾಡುತ್ತಿದ್ದರು. ಅವರ ತಕ್ಕಡಿಯ ತೂಕದ ಕಲ್ಲುಗಳಲ್ಲಿ ಒಂದು ದುಂಡಾದ ಕಲ್ಲು ತನ್ನ ಮಹಿಮಾ ಶಕ್ತಿಯಿಂದ ವ್ಯಾಪಾರಿಗಳ ಮೋಸದ ವರ್ತನೆಯನ್ನು ತಿಳಿದು ಗ್ರಾಹಕರಿಗೆ ಸಾಮಾನುಗಳನ್ನು ಹೆಚ್ಚಿಗೆ ತೂಗಿಕೊಡಲು ಭಾರವಾಗಿ ಕುಳಿತುಕೊಳ್ಳತೊಡಗಿತು. ದಿನದಿಂದ ದಿನಕ್ಕೆ ಇದೇ ರೀತಿಯಾಗಿ ವ್ಯಾಪಾರಿಗಳಿಗೆ ನಷ್ಟವಾಗತೊಡಗಿತು. ಅವರು ಈ ತೂಕದ ಕಲ್ಲಿನ ಮೇಲೆ ಅನುಮಾನಗೊಂಡು ಅದನ್ನು ಅಲ್ಲಿಯೇ ಎಸೆದು ತಮ್ಮ ಊರಿಗೆ ಹೊರಟುಹೋದರು.

ಅನಂತರ ಆ ತೂಕದ ಕಲ್ಲು ಉರುಳುತ್ತಾ ಉರುಳುತ್ತಾ ಮುಂದೆ ಮುಂದೆ ಸಾಗಿ ಇಂಡಿ ತಾಲೂಕಿನ ಹಿರೇರೂಗಿ ಎಂಬ ಗ್ರಾಮದಲ್ಲಿ ಬಂದು ನಿಂತಿತು. ಈ ಊರಿನಲ್ಲಿ ಮೊದಲೇ ನೆಲೆನಿಂತಿದ್ದ ಬೀರಪ್ಪ ದೇವರಲ್ಲಿಗೆ ಬಂದು ಭೇಟಿಯಾದನು. ನನಗೆ ಈ ಊರಿನಲ್ಲಿ ನಿಲ್ಲಲು ಸ್ವಲ್ಪ ಜಾಗವನ್ನು ಕೊಡು ಎಂದು ಬೇಡಿಕೊಂಡನು. ಅದಕ್ಕೆ ಬೀರಪ್ಪದೇವರು ಜಾಗವನ್ನು ಕೊಡಲು ಒಪ್ಪಲಿಲ್ಲ. ಯಾಕೆಂದರೆ ''ನೀನು ಬಹಳ ಸಿಟ್ಟಿನ ಸ್ವಭಾವದವನು ಇರುವಿ, ನೀನು ಜೋರಾಗಿ ಕಿರುಚಿದರೆ ಊರಲ್ಲಿರುವಂತಹ ಗರ್ಭಿಣಿ ಸ್ತ್ರೀಯರಿಗೆ ನಿನ್ನಿಂದ ನಾನಾ ರೀತಿಯಲ್ಲಿ ಕೆಟ್ಟದ್ದಾಗುತ್ತದೆ. ಅದಕ್ಕೆ ಇಲ್ಲಿ ನಿಲ್ಲಲು ಜಾಗವನ್ನು ಕೊಡುವುದಿಲ್ಲ''ವೆನ್ನುತ್ತಾನೆ. ಆದರೆ ಕೊನೆಗೆ ದಕ್ಷಿಣ ದಿಕ್ಕಿಗೆ ಮುಖಮಾಡಿ ನಿನ್ನಪಾಡಿಗೆ ಇರುವುದಾದರೆ ನಿನಗೆ ಜಾಗ ಕೊಡುವೆನು ಎಂದು ಜಟ್ಟಿಂಗೇಶ್ವರನಿಗೆ ಜಾಗ ಕೊಡಲು ಸಮ್ಮತಿಸಿದನು. ಆಗಿನಿಂದ ಇವತ್ತಿನವರೆಗೆ ಈ ಜಟ್ಟಿಂಗನು ಈ ಹಿರೇರೂಗಿ ಗ್ರಾಮದಲ್ಲಿಯೇ ಉಳಿದುಬಿಟ್ಟನು.

ಇನ್ನೊಂದು ಪ್ರತೀತಿಯ ಪ್ರಕಾರ ಹಿರೇರೂಗಿಯ ಸಮೀಪದಲ್ಲಿಯೇ ಇರುವ ಸಿಂದಗಿ ತಾಲೂಕಿನ ವ್ಯಾಪ್ತಿಯಲ್ಲಿ ಬರುವಂತಹ ಬಳಗಾನೂರದ ಕೆಂಚರಾಯ ದೇವರು ಮತ್ತು ಈ ರೂಗಿಯ ಜಟ್ಟಿಂಗನು ಇಬ್ಬರು ಅಣ್ಣ ತಮ್ಮಂದಿರು ಎಂಬ ಕಥೆ ಪ್ರಚಲಿತವಿದೆ.

ಜಟ್ಟಿಂಗೇಶ್ವರನು ಕೆಂಚಪ್ಪನ ಭೇಟಿಗಾಗಿ ಪ್ರತಿವರ್ಷ ಪಲ್ಲಕ್ಕಿಯಲ್ಲಿ ಕುಳಿತುಕೊಂಡು ಬಳಗಾನೂರಕ್ಕೆ ಹೋಗುತ್ತಿದ್ದನು. ಮಧ್ಯದಲ್ಲಿ ಹಿರೋಡೇಶ್ವರನು ಇವರ ಭೇಟಿಯನ್ನು ಮೊಟಕುಗೊಳಿಸಬೇಕೆಂಬ ಕಾರಣದಿಂದ

ಜಟ್ಟೆಪ್ಪನ ಮೇಲೆ ಇಲ್ಲಸಲ್ಲದ ಚಾಡಿಯನ್ನು ಹೇಳತೊಡಗಿದನು. ಆಗ ಜಟ್ಟಪ್ಪನಿಗೆ ಸಿಟ್ಟುಬಂದು ಹಿರೋಡೇಶ್ವರನನ್ನು ಅಲ್ಲಿಯೇ ತುಳಿದುಬಿಟ್ಟನು. ನಂತರ ಅದೇ ಜಾಗದಲ್ಲಿ ಅಂದರೆ ಸಂಗೋಗಿ ಎಂಬ ಗ್ರಾಮದಲ್ಲಿ ಜನರಿಗೆ ಒಳ್ಳೆಯದನ್ನು ಮಾಡುತ್ತಾ ಪ್ರಸಿದ್ಧ ವ್ಯಕ್ತಿಯಾದನು.

ಈ ಜಟ್ಟಿಂಗನನ್ನು ತಂದಂತಹ ಬಣಜಿಗರು ಹತ್ತಿಯ ವ್ಯಾಪಾರಕ್ಕಾಗಿ ಮಲೆನಾಡಿನಿಂದ ಬಿಜಾಪೂರಕ್ಕೆ ಸಾಕಷ್ಟು ಪ್ರಮಾಣದಲ್ಲಿ ಬರುತ್ತಿದ್ದರು. ಆ ವ್ಯಾಪಾರಿಗಳೆಂದರೆ ''ಕಲಶೆಟ್ಟಿ-ಮಲಶೆಟ್ಟ'' ಇವರ ಜೊತೆಗೆ ಈ ಜಟ್ಟಿಂಗನು ಬಂದನು. ಬಿಜಾಪೂರಕ್ಕೆ ಬರುವ ಮುಂಚೆ ಜಟ್ಟಿಂಗನು ''ನರಸಿಂಹ'' ದೇವರಾಗಿ ಬಂದಿದ್ದನು. ನಂತರ ಇಂಡಿ ತಾಲೂಕಿನ ಹಿರೇರೂಗಿಯಲ್ಲಿ ನೆಲೆಗೊಂಡಾಗ ''ಶ್ರೀ ಜಟ್ಟಿಂಗೇಶ್ವರ'' ಎಂಬ ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದಿದನು.

ಬೀರಪ್ಪನು ಇನ್ನೊಂದು ದೃಷ್ಟಿಕೊನದಲ್ಲಿ ಜಟ್ಟಿಂಗನಿಗೆ ನೀನು ವ್ಯಾಪಾರಿಗಳ ಜೊತೆ ಪಟ್ಟಣದಲ್ಲಿ ಇದ್ದಂತಹವನು. ಈ ಹಳ್ಳಿಯಲ್ಲಿ ಅದೂ ಇಂತಹ ಪ್ರದೇಶದಲ್ಲಿ ನಿನಗೆ ಈ ಪರಿಸರ ಸರಿಹೊಂದುವುದಿಲ್ಲ ಎಂಬ ಕಾರಣಕ್ಕಾಗಿ ಮೊದಲಿಗೆ ಜಾಗವನ್ನು ಕೊಡಲು ಒಪ್ಪಲಿಲ್ಲ.

ಇನ್ನೊಂದು ದೃಷ್ಟಿಕೋನದಲ್ಲಿ ಇಲ್ಲಿನ ಸ್ಥಳೀಯರು ಹೇಳುವುದೇನೆಂದರೆ ಈ ಜಟ್ಟಿಂಗನು ಸ್ವಾಭಾವಿಕವಾಗಿ ಎಲ್ಲರಂತೆ ಮನುಷ್ಯರ ಹೊಟ್ಟೆಯಲ್ಲಿ ಹುಟ್ಟಲಿಲ್ಲ. ಅಂದರೆ ಮನುಷ್ಯರ ನೆಲೆಯಿಂದ ಬಂದಿಲ್ಲ. ಸಾಕ್ಷಾತ್ ಪರಮಾತ್ಮನ ಕೃಪೆಯಿಂದ ನೇರವಾಗಿ ಭೂಲೋಕಕ್ಕೆ ಬಂದಿದ್ದಾನೆಂದು ನಂಬಿದ್ದಾರೆ.

ಹಿರೇರೂಗಿಯ ಜಟ್ಟಿಂಗನ ದೇವಸ್ಥಾನವು ಪೂರ್ವ ದಿಕ್ಕಿಗೆ ಇದೆ. ಆದರೆ ಗರ್ಭಗುಡಿಯಲ್ಲಿ ದೇವರು ದಕ್ಷಿಣ ದಿಕ್ಕಿಗೆ ಮುಖಮಾಡಿ ನಿಂತಿದ್ದಾನೆ. ಆಗಿನಿಂದ ದೇವರು ಇಲ್ಲಿಯೇ ಉಳಿದುಬಿಟ್ಟು ಅನೇಕ ಪವಾಡಗಳನ್ನು ಮಾಡುತ್ತಾ ಮೆಚ್ಚುಗೆಯನ್ನು ಪಡೆದನು. ಭೀರಪ್ಪನ ಪವಾಡ ಕಡಿಮೆಯಾಗಿ ಈ ಗ್ರಾಮದಲ್ಲಿ ಜಟ್ಟಿಂಗನ ಪವಾಡ ಜಾಸ್ತಿಯಾಯಿತು. ಮುಂದೆ ಬರುಬರುತ್ತಾ ''ವೀರಕಾರ'' ಎಂಬ ವಂಶಜರ ಮೈಯಲ್ಲಿ ಬಂದು ಅನೇಕ ಪವಾಡಗಳನ್ನು ಮಾಡುತ್ತಾ ಸಾಗಿದನು. ಆ ಪವಾಡಗಳಿಂದ ಇಂದು ನಮಗೆ ಸಂಪೂರ್ಣ ದಾರಿದೀಪವಾಯಿತು. ಎಂದು ಇಲ್ಲಿನ ಜನರು ಹೇಳುತ್ತಾರೆ. ಆದ್ದರಿಂದ ಅಂದಿನಿಂದ ಇವತ್ತಿನವರೆಗೆ ಜಟ್ಟಿಂಗೇಶ್ವರನು ರೂಗಿಯ ಗ್ರಾಮದೇವತೆಯಾಗಿ ಜಾತ್ರೆ ಉತ್ಸವಗಳಿಂದ ಮೆರೆಯುವಂತಾದನು.

**ಜಾತ್ರೆ - ಉತ್ಸವ**

ಡೊಳ್ಳಿನ ಹಾಡುಗಳನ್ನು ಬಾರಿಸುತ್ತಾ ಮನೆ-ಮನೆಗಳಿಗೆ ಹೋಗಿ ನೀರು ಕಾಯಿಗಳನ್ನು ಹಾಕಿಸುತ್ತಾರೆ. ಸುತ್ತಮುತ್ತಲಿನ ಎಲ್ಲಾ ಗ್ರಾಮಗಳ ಡೊಳ್ಳಿನ ಮೇಳದವರು ಹಾಗೂ ಡೊಳ್ಳುವಾಲಗದವರು. ದಟ್ಟಿ ಕುಣಿತವರು ಭಾಗವಹಿಸುತ್ತಾರೆ. ಇಲ್ಲಿಯ ಒಂದು ವಿಶೇಷವೆಂದರೆ ಯಾವ ಡೊಳ್ಳಿನ ಮೇಳದವರಿಗೂ ಆಮಂತ್ರಣ ಕೊಡುವುದಿಲ್ಲ. ಭಕ್ತರು ಇದು 'ಹಾಲುಮತದ ಮಹಾಮನೆ' ಎಂದು ಭಕ್ತಿಯಿಂದ ಬರುತ್ತಾರೆ. ರಾತ್ರಿಯಿಡೀ ಡೊಳ್ಳಿನ ಹಾಡುಗಳನ್ನು ಹಾಡುತ್ತಾರೆ. ಮತ್ತು ಯುಗಾದಿ ಹಬ್ಬಕ್ಕೆ ಇದಕ್ಕಿಂತಲೂ ದೊಡ್ಡ ಪ್ರಮಾಣದಲ್ಲಿ ಜನರು ಸೇರಿ ಜಾತ್ರೆಯನ್ನು ಮಾಡುತ್ತಾರೆ. ಈಗ ಇವನ ಭಕ್ತಾದಿಗಳು ದೇಶದೆಲ್ಲೆಡೆ ಇರುವುದರಿಂದ ಪ್ರತಿನಿತ್ಯ ಎಷ್ಟೋ ಜನರು ನೈವೇದ್ಯ. ತೆಂಗಿನಕಾಯಿಗಳನ್ನು ತೆಗೆದುಕೊಂಡುಬಂದು ಕಾಯಿ ಕರ್ಪೂರಮಾಡಿ ಜಟ್ಟಿಂಗೇಶ್ವರನ ಆಶೀರ್ವಾದ ಪಡೆಯುವರು. ಇದು ಇವತ್ತಿನವರೆಗೂ ನಿರಂತರವಾಗಿ ನಡೆದ ವಿಷಯವಾಗಿದೆ. ಭಕ್ತಾದಿಗಳು ಈ

ಜಟ್ಟಿಂಗೇಶ್ವರನ ದೇವಸ್ಥಾನಕ್ಕೆ ಹಲವಾರು ರೀತಿಯಲ್ಲಿ ಕಾಣಿಕೆಗಳನ್ನು ಕೊಡುವುದರಿಂದ ಶ್ರೀಮಂತವಾದ ದೇವರು ಎನಿಸಿಕೊಂಡಿದ್ದಾನೆ.

ದೀಪಾವಳಿ ಮತ್ತು ಯುಗಾದಿ ಹಬ್ಬದ ಜಾತ್ರೆಯಲ್ಲಿ ಮಳೆ ಬೆಳೆಯ ಮುನ್ಸೂಚನೆಯನ್ನು ಹೇಳಲಾಗುತ್ತದೆ. ಈ ಜಟ್ಟಿಂಗನ ದೇವಸ್ಥಾನಗಳಿಗೆ ಹೆಣ್ಣು ಮಕ್ಕಳಿಗೆ ಪ್ರವೇಶವಿಲ್ಲ ಎಂಬ ನಂಬಿಕೆಯನ್ನು ಇಲ್ಲಿನ ಜನರು ನಿಯಮಗಳನ್ನು ಮಾಡುತ್ತಾ ಸಾಗಿದ್ದಾರೆ. ಈ ಜಟ್ಟಿಂಗನು ಆಕಾಶದಿಂದ ಐರಾವತ ಆನೆ ಡುಬ್ಬದಿಂದ ಜನಿಸಿದ್ದಾನೆ ಎಂಬ ಸಂಗತಿಯನ್ನು ಇಲ್ಲಿ ಜನರು ನಂಬಿದ್ದಾರೆ.

ಕಲ್ಲಣದ ಕೆಲಶೆಟ್ಟಿ
ಮಲ್ನಾಡದ ಮಲಶೆಟ್ಟಿ
ದೋಣಿ ಹೊತ್ತು ವ್ಯಾಪಾರ ಮಾಡುವವರು

ನಾಕು ಮಂದಿ ಕೂಡ್ಯಾರ
ನಾಕು ಮಾತು ಆಡ್ಯಾರ
ಬೆಳಕು ತಂದು ಹಚ್ಚಬೇಕು ದೇವರ ಮುಂದೆ
ಜಗ ಜಗ ಹೊಳೆಯುತ್ತಿದೆಯೋ ಮಾರಿಯ (ಮುಖದ) ಮುಂದೆ

ನಗಾರಿಯ ನಾವಲ್ಲಿ ಭಾಜಿ ತಂದ
ಈರಕಾರರು ಕುಣಿಯುತ್ತಾರೆ ದೇವರ ಮುಂದ
ಅವರ ತಲೆಯ ಮೇಲೆ ನೋಡೋ ಹನುಮನ ಹಕ್ಕಿಯ ಬಾಲ.

ಎಂಬ ಹಂತಿಪದದಲ್ಲಿ ಜಟ್ಟಂಗೇಶ್ವರನ ಮೂಲದ ಬಗೆಗೆ ಹೇಳುವಂತಿದೆ. ಈ ದೇವರ ಸೇವಕರು (ಪೂಜಾರಿಗಳು) ಎಂದರೆ ''ಈರಕಾರರು ಈ ದೇವರನ್ನು ಗುರುವನ್ನಾಗಿ ಮಾಡಿಕೊಂಡು ಹೇಳಿಕೆಗಳನ್ನು ಹೇಳುತ್ತಾರೆ. ಈರಕಾರ ಮೈತುಂಬಾ ಉಡಿಗೆ ಕೈಯಲ್ಲಿ ದೇವರ ಫೋಟೋ ಕಂಚು, ಹಿತ್ತಾಳೆ, ಬೆಳ್ಳಿ, ಬಂಗಾರದ ಆಭರಣಗಳನ್ನು ಹಾಕಿಕೊಂಡು ಅನೇಕ ಲೀಲೆಗಳನ್ನು ಮಾಡುತ್ತಾರೆ. ಕಾಲಿನಲ್ಲಿ ಗೆಜ್ಜೆ ಕಟ್ಟಿಕೊಂಡು, ಕೈಯಲ್ಲಿ ಡೊಳ್ಳು ಬಾರಿಸುತ್ತಾ ದೇವರ ಮುಂದೆ ಪದ್ಧತಿಯ ಪ್ರಕಾರ ಕುಣಿಯುತ್ತಾರೆ. ಕುಣಿ-ಕುಣಿದು ಅವರ ಮೈಮೇಲೆ ದೇವರು ಬಂದು ಆರು ತಿಂಗಳುಗಳ ಹಿಂದಿನ ಮುಂದಿನ ಮಳೆ ಬೆಳೆಯ ಬಗ್ಗೆ ಒಡಮೂಡಿಸುತ್ತಾರೆ. ಹೀಗೆ ಈ ದೆವರ ಜಾತ್ರೆಯಲ್ಲಿ ಎರಡು ದಿನಗಳವರೆಗೆ ನಡೆಯುತ್ತದೆ.

ಈ ದೇವರ ಪ್ರಮುಖ ಭಕ್ತರು ''ಕೊರಕೊಂಚಿಗಳು'' ಎಂಬ ಜನಾಂಗದವರು ಪ್ರತಿವರ್ಷ ಜಾತ್ರೆಗೆ ಬರುತ್ತಾರೆ. ದೇವಸ್ಥಾನದಿಂದ ಮನೆಯ ತನಕ ದೋತರವನ್ನು ನೆಲದ ಮೇಲೆ ಹಾಸಿ ಪಲ್ಲಕ್ಕಿಯನ್ನು ಹೊತ್ತವನಿಗೆ ನೆಲದ ಮೇಲೆ ನಡೆದಾಡಲಿಕ್ಕೆ ಬಿಡುವುದಿಲ್ಲ. ಇವರು ಈ ಕೆಲಸವನ್ನು ಸ್ವತಃ ತಾವೇ ಮಾಡುತ್ತಾರೆ ಅಥವಾ ಪೂಜಾರಿಯ ಮನೆಯವರು ಈ ಕೆಲಸವನ್ನು ಮಾಡುತ್ತಾರೆ. ಇತ್ತಿತ್ತಲಾಗಿ ತಮ್ಮ ಹೊಟ್ಟೆಯನ್ನು ತುಂಬಿಸಿಕೊಳ್ಳಲಿಕ್ಕೆ ಕೊರಕೊಂಚಿಗಳು ದೇಶದೆಲ್ಲೆಡೆ ಹೋಗಿ ನೆಲೆಸಿದ್ದಾರೆ. ಸುಮಾರು ೪೫ ವರ್ಷಗಳ ಹಿಂದೆ ಈ ದೇವಸ್ಥಾನವನ್ನು ಕಟ್ಟುವ ಸಮಯದಲ್ಲಿ ಪಾಯದಲ್ಲಿ ಕೊರಕೊಂಚಿಗಳೇ ಐದು ದುಡ್ಡು ಹಾಕಬೇಕೆಂಬ ನಿಯಮವಿತ್ತು. ಇವರು ಊರು ಬಿಟ್ಟು ಎಷ್ಟೋ ದೂರದಲ್ಲಿದ್ದರೂ ಕೂಡಾ ನಿಗದಿತ ಸಮಯಕ್ಕೆ ಬಂದು ಪಾಯವನ್ನು ತುಂಬಿಸಿದರು.

ಈ ಕೊರಕೊಂಚಿಗಳು ಪ್ರತಿವರ್ಷ ಜಾತ್ರೆಗೆ ಬಂದರೆ ಉತ್ಸವವನ್ನು ಜರುಗುತ್ತದೆ. ಈ ದೇವಸ್ಥಾನದ ಪೂಜಾಕಾರ್ಯಕ್ರಮವನ್ನು ಪಂಚಮಶಾಲಿಗಳು. ಕೊರಕೊಂಚಿಗಳು ಮಾಡುತ್ತಿದ್ದರು. ಇದನ್ನು ನಂಬಿಕೊಂಡು ಕುಳಿತರೆ ತಮ್ಮ ಕೊಟ್ಟೆ ತುಂಬುವುದಿಲ್ಲ ಎಂದು ಬೇರೆ ಕಡೆಗೆ ವಲಸೆ ಹೋದರು. ನಂತರ ಹಾಲುಮತದವರು ಈ ದೇವರ ಪೂಜೆಯಲ್ಲಿ ಪಾಲ್ಗೊಳ್ಳುತ್ತಾರೆ.

**ಪವಾಡಗಳು**

ಒಮ್ಮೆ ಭೀಕರ ಬರಗಾಲದ ಸಂದರ್ಭದಲ್ಲಿ ಎಲ್ಲಾ ಜನರು ಬೇರೆ ಕಡೆಗೆ ಹೋಗುವಾಗ ಈ ದೇವರನ್ನು ಇಲ್ಲಿಯೇ ಬಿಟ್ಟು ಹೋಗುವ ಸಂದರ್ಭದಲ್ಲಿ ಆದ ಪವಾಡದ ಪ್ರಸಂಗ ಹೀಗಿದೆ.

ಪ್ರತಿನಿತ್ಯ ಈ ದೇವರ ಗದ್ದುಗೆಯ ಮೇಲೆ ಒಂದು ಬೆಳ್ಳಿಯ ನಾಣ್ಯ ಬೀಳುತ್ತಿತ್ತು. ಅದರಿಂದ ಪೂಜಾರಿಗಳು ತಮ್ಮ ಹೊಟ್ಟೆಯನ್ನು ತುಂಬಿಸಿಕೊಳ್ಳುತ್ತಿದ್ದರು. ಈ ದೇವರ ಪೂಜಾ ಕಾರ್ಯಕ್ರಮವನ್ನು ಆರು ವಂಶಜರು. ಕೂಡಿ ಒಂದೊಂದು ಮನೆತನದವರು ಒಂದೊಂದು ವರ್ಷದಂತೆಯೇ ಪೂಜೆಯನ್ನು ಮಾಡುತ್ತಾಸಾಗಿದ್ದಾರೆ. ಈ ಮನೆತನದವರಿಗೆ ಜಟ್ಟಿಂಗೇಶ್ವರನು ಯಾವ ಕೊರತೆಯನ್ನು ಇವತ್ತಿನವರೆಗೂ ಕೊಟ್ಟಿಲ್ಲ.

ಮತ್ತೊಂದು ವಿಶೇಷವೆಂದರೆ ಹಾಲುಮತದ ದೇವರಾದರೂ ಹಿಂದೂ ಮುಸ್ಲಿಂ ಜನರು ಒಂದೇ ಎಂಬ ಭಾವನೆಯಿಂದ ಆರಾಧಿಸುತ್ತಿದ್ದಾರೆ. ಜಟ್ಟಿಂಗೇಶ್ವರನ ಭಕ್ತಾದಿಗಳು ಮತ್ತು ಪೂಜಾರಿಗಳು ಸಸ್ಯಾಹಾರಿಗಳಾಗಿಯೇ ಇದ್ದಾರೆ. ಹಾಲುಮತದಲ್ಲಿ ಜಟ್ಟಿಂಗನ ಇನ್ನೊಂದು ವಿಶೇಷವೆಂದರೆ, ದೇವಸ್ಥಾನದ ಮುಂದಿನ ಭಾಗದಲ್ಲಿ ಇರುವಂತಹ ಹಣತೆಯನ್ನು ಹೊತ್ತುಕೊಂಡು ನಿಂತಿದ್ದ ಮಾಲಗಂಬವು ದಿನಾಲು ಮೂರು ಹೊತ್ತು ಪೂಜೆ ಜರುಗುವುದು. ಇಂಡಿ ತಾಲೂಕಿನಲ್ಲಿ ಹಿರೇರೂಗಿ ಜಟ್ಟಿಂಗೇಶ್ವರನಂತೆಯೇ ಹಲವಾರು ಸ್ಥಳಗಳಲ್ಲಿ ಹಾಲುಮತದ ದೇವಸ್ಥಾನಗಳು ಕಂಡುಬರುತ್ತದೆ.

**ದೇವಾಲಯದ ಸ್ವರೂಪ**

ಈ ಹಿರೇರೂಗಿ ಗ್ರಾಮದಲ್ಲಿ ಹಿಂದೂ ಮುಸ್ಲಿಂರೆಲ್ಲರೂ ಸೇರಿ ಸೌಹಾರ್ಧತೆಯಿಂದ ಸುಮಾರು ೧೮ನೆಯ ಶತಮಾನದಲ್ಲಿ ಗ್ರಾಮದ ಪೂರ್ವದಿಕ್ಕಿಗೆ ಅಭಿಮುಖವಾಗಿ ಭವ್ಯವಾದ ಕಟ್ಟಡವನ್ನು ನಿರ್ಮಿಸಿದ್ದಾರೆ.[೧] ಈ ದೇವಸ್ಥಾನವು ಎತ್ತರವಾದ ಜಗಲಿಯ ಮೇಲೆ ಗರ್ಭಗೃಹ, ಸಭಾಮಂಟಪಗಳಿಂದ ಕೂಡಿದ್ದು, ಒಳಗೆ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವಸ್ಥಾನವು ಮುಂಭಾಗದಲ್ಲಿ ಕಮಾನುಗಳಿಂದ ಅಲಂಕರಿತವಾಗಿದೆ. ಜಟ್ಟಿಂಗನ ದೇವಸ್ಥಾನದ ಉತ್ತರ ಭಾಗದಲ್ಲಿ ನಿಂಗರಾಯನ ಚಿಕ್ಕ ಗುಡಿಯಿದೆ. ದೇವಸ್ಥಾನದ ಮುಂದಿನ ಸ್ಥಳದಲ್ಲಿ ದೀಪಸ್ತಂಭ ಮತ್ತು ಪೂರ್ವದಿಕ್ಕಿಗೆ ಪ್ರವೇಶ ಗೋಪುರವು ಕಂಡುಬರುತ್ತದೆ.[೨]

**ಟಿಪ್ಪಣಿಗಳು**

೧. ಕರ್ನಾಟಕ ದೇವಾಲಯ ಕೋಶ - ಲೇ, ಡಾ.ವಾಸುದೇವ ಬಡಿಗೇರ, ಪು - ೧೭

೨. ಕರ್ನಾಟಕ ದೇವಾಲಯ ಕೋಶ - ಲೇ, ಡಾ.ವಾಸುದೇವ ಬಡಿಗೇರ, ಪು - ೧೮

### ೩.೫. ತಡವಲಗಾದ ಮಡ್ಡಿ ಸಿದ್ಧ

ವಿಜಾಪೂರ ಜಿಲ್ಲೆಯ ಇಂಡಿ ತಾಲೂಕಿನಲ್ಲಿ ಇರುವಂತಹ ಹಾಲುಮತ ದೇವಸ್ಥಾನವೇ ಈ ತಡವಲಗಾದ ಮಡ್ಡಿಸಿದ್ಧ. ಇವನು ಇಂಡಿಯಿಂದ ಬಿಜಾಪೂರಕ್ಕೆ ಹೋಗುವ ಮಾರ್ಗದಲ್ಲಿ ಸುಮಾರು ೧೮ ಕಿ.ಮೀ. ಅಂತರದಲ್ಲಿ ಈ ಗ್ರಾಮದಲ್ಲಿ ನೆಲೆನಿಂತಿದ್ದಾನೆ. ಈ ಗ್ರಾಮದ ಪಶ್ಚಿಮ ದಿಕ್ಕಿಗೆ ನಿಂಬಾಳ ಗ್ರಾಮಕ್ಕೆ ಹೋಗುವ ದಾರಿಯ ಬಲಬದಿಯಲ್ಲಿ ಮಡ್ಡಿಸಿದ್ಧನ ದೇವಸ್ಥಾನವಿದೆ. ಇವನು ಮೂಲತಃ 'ಸಿದ್ಧಾಪೂರ' ಎಂಬ ಗ್ರಾಮದವನೆಂದು ಇಲ್ಲಿನ ಸ್ಥಳೀಯರು ಹೇಳುತ್ತಾರೆ. ನಂತರ ''ಚಡಚಣ''ದಲ್ಲಿ ಕೆಲವು ವರ್ಷಗಳವರೆಗೆ ಇದ್ದು, ಸಂಸಾರದ ಜಂಜಾಟದಿಂದ ಕ್ಯಾತನಕೇರಿ, ನಿಂಗದಳ್ಳಿ, ಝಳಕಿ, ಸಾಲೋಟಗಿ, ನಿಂಬಾಳ ಹೀಗೆ 'ಕರಿಸಿದ್ಧನ' ಸೇವೆ ಮಾಡುತ್ತಾ ''ಗೊಳ್ಳಗಿ'' ಪಟ್ಟಣಕ್ಕೆ ಬಂದನು. ಇದಕ್ಕೆ ನಂತರ ಬರುಬರುತ್ತಾ ''ತಡವಲಗಾ ಅಥವಾ ತಡಲಗಿ'' ಎಂಬ ಹೆಸರಿನಿಂದ ರೂಢಿಯಾಯಿತು. ಅಲ್ಲಿನ ಸ್ಥಳೀಯರಿಗೆ ಈ ಹೆಸರು ಹೇಗೆ ಬಂದಿತೆಂಬುದನ್ನು ಖಚಿತವಾಗಿ ಯಾರಿಗೂ ಗೊತ್ತಿಲ್ಲ.

ಮಡ್ಡಿಸಿದ್ಧನು ಈ ಗ್ರಾಮದಲ್ಲಿಯೇ ನೆಲೆನಿಂತು ಪವಾಡಗಳು. ಹೇಳಿಕೆಗಳನ್ನು ಮಾಡುತ್ತಾ ಸುತ್ತ ಮುತ್ತಲ ಗ್ರಾಮಗಳಲ್ಲಿ ಪ್ರಸಿದ್ಧಿಯನ್ನು ಹೊಂದಿ ಏಳು ಗ್ರಾಮಗಳ ಹಿರಿತನವನ್ನು ಗಳಿಸಿದನು. ತಡವಲಗಾ ಗ್ರಾಮದ ''ಗಾಣಿಗ''ದವರ ಮನೆತನದಲ್ಲಿ ಪೂಜೆಗೆ ಒಳಗಾಗಿದ್ದನು. ಆ ಗಾಣಿಗ ಸಮಾಜದವರಿಗೆ ಪ್ರತಿದಿನ ಪೂಜೆಮಾಡಲು ಆಗಲಿಲ್ಲವಾದ್ದರಿಂದ ಹಾಲುಮತದ ''ಸಿದ್ಧ''ಎನ್ನುವ ಆಳು ಮನುಷ್ಯ ಇವರ ಮನೆಯಲ್ಲಿ ಕೆಲಸಕ್ಕಿದ್ದನು. ಇವನನ್ನು ಕರೆಯಿಸಿ ಈ ದೇವರನ್ನು ತೆಗೆದುಕೊಂಡು ನಮ್ಮ ತೋಟದ ಸ್ವಲ್ಪ ಮೂಲೆಯಲ್ಲಿ ಪ್ರತಿಷ್ಠಾಪಿಸಿ ಪೂಜಾ ಕಾರ್ಯಕ್ರಮವನ್ನು ಮಾಡುತ್ತಾ ನೀನು ಉಪಜೀವನವನ್ನು ಸಾಗಿಸು ಎಂದು ಹೇಳಿ ತಮ್ಮ ಮನೆಯಲ್ಲಿದ್ದ ಈ ಮಡ್ಡಿಸಿದ್ಧನನ್ನು ಈ ಆಳಿಗೆ ಕೊಟ್ಟರು. ಈ ಗ್ರಾಮದಲ್ಲಿ ''ನಾಡಗೌಡರ'' ಆಸ್ತಿಯಲ್ಲಿ ಈ ಮಡ್ಡಿಸಿದ್ಧನು ನೆಲೆ ನಿಂತಂತಹ ಘಟನೆ ಜರುಗಿ ಸುಮಾರು ಸಾವಿರಕ್ಕಿಂತಲೂ ಹೆಚ್ಚು ವರ್ಷಗಳೇ ಸರಿದುಹೋಗಿದೆ ಎಂದು 'ಇಲ್ಲಿನ ಸ್ಥಳೀಯರು ಹೇಳುತ್ತಾರೆ. ಈ ದೇವರ ಪೂಜೆಯನ್ನು ಕೈಗೊಳ್ಳುವವರಿಗೆ ''ಹಿರಿಕುರ್ಕಿ'' ಎಂಬ ಹೆಸರಿನಿಂದ ಕರೆಯಲಾಗುತ್ತದೆ. ಈ ಗ್ರಾಮದ ಜನಸಂಖ್ಯೆಯಲ್ಲಿ ಶೇಕಡಾ ೪೦ ರಷ್ಟು ಹಾಲುಮತ ಜನಾಂಗದವರಿದ್ದಾರೆ.

**ಜಾತ್ರೆ**

ಮಡ್ಡಿಸಿದ್ಧನ ಜಾತ್ರೆಯು ದೀಪಾವಳಿ ಅಮಾವಾಸ್ಯೆಗೆ ಒಂದೇ ದಿನದಲ್ಲಿಯೇ ಸಣ್ಣ ರೀತಿಯಲ್ಲಿ ನಡೆಯುತ್ತದೆ. ಇವನಿಗೆ ಬಲು ಇಷ್ಟವಾದ ಕರಿಕಡುಬು, ಚಪಾತಿ, ಬೋಂದಿ, ಸಜ್ಜಕ ಈ ಪದಾರ್ಥಗಳನ್ನು ಮಾಡಿ ನೈವೇದ್ಯವನ್ನು ಹಿಡಿಯುತ್ತಾರೆ. ನಂತರ ದೇವಸ್ಥಾನಕ್ಕೆ ಬಂದಂತಹ ಭಕ್ತಾದಿಗಳಿಗೆ ಹಂಚುತ್ತಾರೆ.

ಮಡ್ಡಿಸಿದ್ಧನ ಜಾತ್ರೆಗೆ ಸುತ್ತಮುತ್ತಲಿನ ಐದು ಗ್ರಾಮಗಳ ಪಲ್ಲಕ್ಕಿಯನ್ನು ಕೂಡಿಸಿ, ಡೊಳ್ಳಿನ, ಪದಗಳನ್ನು ರಾತ್ರಿಯಿಡೀ ಡೊಳ್ಳುವಾದ್ಯದ ಸಮೇತ ಹಾಡಿ ಸಂಪ್ರದಾಯದಂತೆಯೇ, ಜಾತ್ರೆ ಜರುಗುತ್ತದೆ. ಹೀಗಾಗಿ ಈ ಮಡ್ಡಿಸಿದ್ಧನ ಪೂಜೆಯನ್ನು ಇವತ್ತಿನವರೆಗೂ ಹಾಲುಮತದ ಜನಾಂಗದವರೇ ಮುಂದುವರೆಯಿಸಿಕೊಂಡು ಬಂದಿದ್ದಾರೆ.

೩.೬. ಬೋಳೆಗಾಂವ ಸಾವರ ಸಿದ್ಧ

ಇಂಡಿಯಿಂದ ಈಶಾನ್ಯ ದಿಕ್ಕಿಗೆ ಸುಮಾರು ೧೫ ಕಿ.ಮೀ ಅಂತರದ 'ಬೋಳೆಗಾಂವ' ಗ್ರಾಮದಲ್ಲಿ ಗೌಡರ ತೋಟದಲ್ಲಿ ಸಾವರಸಿದ್ಧನ ದೇವಸ್ಥಾನವಿದೆ. ಅದು ಇಂದಿಗೂ ವರ್ಗ, ವರ್ಣ, ಹಾಗೂ ಲಿಂಗಬೇಧಗಳಿಲ್ಲದೇ ಭಕ್ತ ಜನರನ್ನು ಆಕರ್ಷಿಸುತ್ತಿದೆ. ಈ ಗ್ರಾಮದ ಸುತ್ತಮುತ್ತಲೂ ನಾಲ್ಕೈದು ಗ್ರಾಮಗಳಿವೆ. ಬೋಳೆಗಾಂವ, ತಡವಲಗಾ, ಹಿರೇರೂಗಿ, ನಿಂಬಾಳ, ಈ ನಾಲ್ಕು ಗ್ರಾಮಗಳಲ್ಲಿ ಒಂದಾದ ಬೋಳೆಗಾಂವದಲ್ಲಿ ಭವ್ಯವಾದ ಸಾವರಸಿದ್ಧನ ಮಂದಿರ ತಲೆ ಎತ್ತಿ ನಿಂತಿದೆ. ಸಾವರಸಿದ್ಧನು ಹಾಲುಮತದ ನಿಜವಾದ ಪೂಜಾರಿಯಾಗಿದ್ದನು. ಇವನು ಮೂಲತಃ ಮಹಾರಾಷ್ಟ್ರ ರಾಜ್ಯದ ಸೋಲಾಪೂರ ಜಿಲ್ಲೆಯ ''ಹಂಚಿಗಾಂವಿ'' ಎಂಬ ಗ್ರಾಮದಿಂದ ಬೋಳೆಗಾಂವಕ್ಕೆ ಬಂದಿದ್ದಾನೆ. ದಂಗೆ, ಕೊಲೆ, ಸುಲಿಗೆ ಆಗುವ ಸಂದರ್ಭದಲ್ಲಿ ಈ ಗ್ರಾಮಕ್ಕೆ ವಲಸೆ ಬಂದು, ಗ್ರಾಮದ ಗೌಡರ ತೋಟದಲ್ಲಿ ನೆಲೆ ನಿಂತನು.

ಇನ್ನೊಂದು ಪ್ರತೀತಿಯ ಪ್ರಕಾರ, ಸಾವರಸಿದ್ಧನು ಒಂದು ದುಂಡಾದ ಕಲ್ಲಿನ ಆಕಾರದಲ್ಲಿದ್ದ ಕಾರಣ ಜನರು ಅದನ್ನೇ ದೇವರು ಎಂದು ಹಂಚಿಗಾಂವಿ ಎಂಬ ಗ್ರಾಮದಲ್ಲಿರುವಾಗಲೇ ಪೂಜಿಸುತ್ತಿದ್ದರು. ಈ ಗ್ರಾಮದಲ್ಲಿ ಹಲವಾರು ತೊಂದರೆಗಳುಂಟಾಗಿ ಬೇರೆ ಗ್ರಾಮಕ್ಕೆ ಹೋಗುವಂತಹ ಸಂದರ್ಭದಲ್ಲಿ ತಮ್ಮ ಜೊತೆಗೆ ಬುಟ್ಟಿಯಲ್ಲಿಟ್ಟುಕೊಂಡು ಹೊರಟರು. ಮುಂದೆ ಮುಂದೆ ಸಾಗಿದಂತೆಲ್ಲಾ ಹೆಜ್ಜೆ ಹೆಜ್ಜೆಗೂ ಆ ಕಲ್ಲು ಭಾರವಾಗಿ ಕೆಳಗೆ ಇಳಿಸಿಟ್ಟು ನಡೆದರು. ಅವರು ಇಳಿಸಿಟ್ಟ ಗ್ರಾಮವೇ ಇಂದಿನ ''ಬೋಳೆಗಾಂವ''ಆಗಿದೆ.

ಇಲ್ಲಿನ ಸ್ಥಳೀಯರಿಗೆ ಆ ದುಂಡಾದ ಕಲ್ಲು ಪರೋಕ್ಷವಾಗಿ ಸಹಾಯವನ್ನು ಮಾಡತೊಡಗಿತು. ಜನರಿಗೆ ಆ ಕಲ್ಲಿನ ಮೇಲೆ ಸಂಶಯ ಮತ್ತು ನಂಬಿಕೆ. ಭಕ್ತಿಯುಂಟಾಗಿ ಜ್ಯೋತಿಷ್ಯ ಭವಿಷ್ಯವನ್ನು ಕೇಳಿ ಈ ಗುಂಡು ಕಲ್ಲಿನ ಮಹಿಮೆಯನ್ನು ಅರಿತರು. ಅವಾಗಿನಿಂದ ಆ ಕಲ್ಲನ್ನು ಒಂದು ಸೂಕ್ತವಾದ ಸ್ಥಳದಲ್ಲಿ ಪ್ರತಿಷ್ಠಾಪಿಸಿದರು. ಇವನು ಮಡಿವಂತಿಕೆ ಶೀಲದಿಂದ ಇದ್ದವನು ಇದರಿಂದ ''ಸಾವರಸಿದ್ಧ'' ಎಂಬ ಹೆಸರಿನಿಂದ ಪ್ರಸಿದ್ಧನಾದನು. ಮೈಗೆಲ್ಲಾ ವಿಭೂತಿಯನ್ನು ಹಚ್ಚಿಕೊಂಡು ಧ್ಯಾನ ಮಗ್ನನಾಗಿ ಕಟ್ಟುನಿಟ್ಟಿನ ವಿಭೂತಿ ಪುರುಷನಾಗಿದ್ದಾನೆ.

ಜಾತ್ರೆ

ಸಾವರಸಿದ್ಧನ ಜಾತ್ರೆ ಪ್ರತಿವರ್ಷ ಬಾದಾಮಿ ಅಮಾವಾಸ್ಯೆಗೆ ತೀರಾ ಸರಳವಾದ ರೀತಿಯಲ್ಲಿ ನಡೆಯುತ್ತದೆ. ಇವನಿಗೆ ಸಸ್ಯಾಹಾರಿ ಪದಾರ್ಥಗಳೇ ನೈವೇದ್ಯವಾಗಬೇಕು. ಸಾವರಸಿದ್ಧನ ಪಲ್ಲಕ್ಕಿಯು ಸಂಪೂರ್ಣವಾಗಿ ಬೆಳ್ಳಿಯದಾಗಿದ್ದು ಇವನಿಗೆ ನಾಲ್ಕು ಮುಖಗಳಿವೆ ಇದರಲ್ಲಿ ಎರಡು ಬೀರಣ್ಣಾ ದೇವರ ಮತ್ತು ಎರಡು ಸಾವರಸಿದ್ಧನ ಮುಖಗಳಿವೆ.

ಮತ್ತೊಂದು ಕತೆಯ ಪ್ರಕಾರ ಗುರು 'ರೇವಣಸಿದ್ಧ'ನ ಮುಖವೂ ಇದೆ ಎಂಬುದು ಇಲ್ಲಿನ ಜನರ ನಂಬಿಕೆಯಾಗಿದೆ. ಜಾತ್ರೆಯ ಸಮಯದಲ್ಲಿ ಇಲ್ಲಿನ ಪೂಜಾರಿಯು ಗುಂಡು, ಸರಪಳಿ, ಭಂಡಾರ ಇವುಗಳನ್ನು ಮೈಮೇಲೆಲ್ಲಾ ಹಾಕಿಕೊಂಡು ಡೊಳ್ಳಿನ ವಾದ್ಯದ ಜೊತೆಗೆ ಕುಣಿದು ವೀರಾವೇಷದಿಂದ ಮಳೆ-ಬೆಳೆಯ ಬಗ್ಗೆ ಮುನ್ಸೂಚನೆಯನ್ನು ಹೇಳುತ್ತಾನೆ. ಸಾವರಸಿದ್ಧನಿಗೆ ಪ್ರತಿದಿನ ಎರಡು ಹೊತ್ತು ಅಂದರೆ ಮುಂಜಾನೆ ಮತ್ತು ಸಾಯಂಕಾಲ ತಪ್ಪದೇ ಪೂಜೆಯಾಗುತ್ತದೆ.

ಈ ಗ್ರಾಮದಲ್ಲಿ ಅಮೋಘಸಿದ್ಧನ ವಂಶಾವಳಿಗಳು: ೧. ಒಗ್ಗಪ್ಪ ೨.ಕಲ್ಲಪ್ಪ

ಹಾಗೆಯೇ ಮೈಲಾರಲಿಂಗನ ವಂಶಾವಳಿಗಳು: ೧. ಜಟ್ಟೆಪ್ಪ ೨. ಕಲ್ಲಪ್ಪ ೩. ಹೂವಣ್ಣ ೪. ಮೈಲಾರ ೫. ಚಂದಪ್ಪ ೬. ಶಿವಪ್ಪ ೭. ಶೀನಪ್ಪ ೮. ನೀಲಪ್ಪ

ಪ್ರತಿವರ್ಷ ''ಕಾರ ಹುಣ್ಣಿಮೆ''ಗೆ ಈವರೆಡು ವಂಶಾವಳಿಗಳಿಗೆ ಪೂಜಾಕಾರ್ಯ ಕ್ರಮಗಳು ಬದಲಾಗುತ್ತವೆ. ಈ ಗ್ರಾಮದಲ್ಲಿ ಬೀರಣ್ಣ ಮತ್ತು ಸಾವರಸಿದ್ಧನ ಜಾತ್ರೆಯು ಒಂದೇ ದಿವಸದಲ್ಲಿ ಏಕಕಾಲದಲ್ಲಿ ಜರುಗುತ್ತದೆ. 'ಇವನ ಜಾತ್ರೆಯಲ್ಲಿ ಹಾಲುಮತದವರು ಅಷ್ಟೇ ಅಲ್ಲ. ಎಲ್ಲಾ ಮತದವರು ಭಾಗವಹಿಸಿ ಆಚರಣೆಯನ್ನು ಮಾಡುತ್ತಾರೆ. ಮತ್ತು ಗ್ರಾಮದ ಓಣಿಗಳಲ್ಲಿ ಪಲ್ಲಕ್ಕಿಯು ಮೆರವಣಿಗೆಯು ಹೊರಟಾಗ ಕಟ್ಟೆಯ ಮೇಲೆ ಕುಳಿತ್ತಿದ್ದಂತಹ ಜನ ಎದ್ದು ನಿಂತು ಗೌರವ ಸಲ್ಲಿಸುವರು. ಹಾಗೇ ಎದ್ದು ನಿಲ್ಲದಿದ್ದರೆ ಪಲ್ಲಕ್ಕಿ ಸಮೇತ ದೇವರು ಕುಳಿತವರಲ್ಲಿಗೆ ಬಂದು ಕೈಯಲ್ಲಿದ್ದ ಬೆತ್ತದಿಂದ ಹೊಡೆಯುವನು ಎಂಬ ಭಯ ಭಕ್ತಿಯನ್ನು ಇಲ್ಲಿನ ಸ್ಥಳೀಯರು ನಂಬಿದ್ದಾರೆ. ದೆವ್ವ, ಪಿಶಾಚಿಗಳನ್ನು ಓಡಿಸುತ್ತಾನೆ ಎಂಬ ನಂಬಿಕೆಯೂ ಇಲ್ಲಿನ ಜನರಲ್ಲಿದೆ.

ಇಂತಹ ಸಿದ್ಧರ ಪರಂಪರೆಯಲ್ಲೂ ಗುರೂಪದೇಶಕ್ಕೆ ತುಂಬಾ ಮಹತ್ವ ಹಾಗೂ ಅಗ್ರಸ್ಥಾನ ಕೊಡಲಾಗಿದೆ. ಇಲ್ಲಿನ ಜನರು ಸಾಧನೆಯ ಮಾರ್ಗದೊಂದಿಗೆ ಸಮಾಜಮುಖಿಗಳಾಗಿದ್ದಾರೆ.

**೩.೭. ಸಂಗೋಗಿಯ ಹಿರೋಡೇಶ್ವರ**

ಹಾಲುಮತದ ದೈವಗಳಲ್ಲಿ ಹಿರೋಡೇಶ್ವರನು ಅತ್ಯಂತ ಪ್ರಸಿದ್ದ ದೇವನಾಗಿದ್ದಾನೆ. ಹಿರೋಡೇಶ್ವರನ ಜನನ ಲೀಲೆಗಳನ್ನು ಅನೇಕ ಡೊಳ್ಳಿನ ಹಾಡುಗಳು ವರ್ಣಿಸುತ್ತವೆ.

ಸಂಗೋಗಿಯು ಇಂಡಿ ತಾಲೂಕಾ ಸ್ಥಳದಿಂದ ಪೂರ್ವದಿಕ್ಕಿಗೆ ಸುಮಾರು ೨೦ ಕಿ.ಮೀ. ದೂರದಲ್ಲಿದೆ. ಈ ಗ್ರಾಮದಲ್ಲಿ ಹಿರೋಡೇಶ್ವರನು ನೆಲೆ ನಿಂತಿದ್ದಾನೆ. ಬಿಜಾಪೂರಕ್ಕೆ ದಿನಾಲು ಹೂವುಗಳನ್ನು ಮಾರಲಿಕ್ಕೆ ವ್ಯಾಪಾರಸ್ಥರು ಹೋಗಿ ಬರುತ್ತಿದ್ದರು. ಆವಾಗ ಈಗಿನಂತೆ ವಾಹನಗಳ ಸೌಕರ್ಯವಿರಲಿಲ್ಲ. ನಡೆದುಕೊಂಡೇ ಹೋಗಬೇಕಾಗಿರುತ್ತಿತ್ತು. ಹೂವು ಮಾರುವವನಿಗೆ ಅರಿವಿಲ್ಲದೆ ಒಂದು ಗುಂಡುಕಲ್ಲು ಅವನ ಬುಟ್ಟಿಯೊಳಗೆ ಕುಳಿತುಕೊಂಡಿತು. ಅವನು ಹೆಜ್ಜೆಯನ್ನು ಹೇಗೆ ಹಾಕುತ್ತಾನೆ. ಹಾಗೆಯೇ ಬುಟ್ಟಿಯು ಭಾರವಾಗತೊಡಗಿತು. ಬುಟ್ಟಿಯಲ್ಲಿ ಇಣುಕಿ ನೋಡಿದಾಗ ಒಂದು ಕಲ್ಲು ಇರುವುದನ್ನು ನೋಡಿ ಅದನ್ನು ನೆಲದ ಮೇಲೆ ಇಟ್ಟುಹೊರಟನು. ಮತ್ತೆ ಮಾಯವಾಗಿ ಆ ಗುಂಡುಕಲ್ಲು ಬುಟ್ಟಿಯೊಳಗೆ ಕುಳಿತಿತು. ಭಾರವಾಗಿ ಮತ್ತೆ ನೋಡುತ್ತಾನೆ. ಅದೆ ಕಲ್ಲು ಸಿಟ್ಟಿನಿಂದ ಎರಡನೆಯ ಸಲವೂ ಕೆಳಗಿಟ್ಟು ಹೋಗುತ್ತಾನೆ. ಮತ್ತೆ ಆ ಕಲ್ಲು ಬುಟ್ಟಿಯೊಳಗೆ ಕುಳಿತಿತು. ಆದರೆ ಈ ಸಲ ಹೂವು ಮಾರುವವನು ಆ ಕಲ್ಲನ್ನು ದಾರಿಯಲ್ಲಿ ಇಡದೇ ತನ್ನ ಊರಿನ ಹೊರಗೆ ಹಳ್ಳದ ದಂಡೆಯಲ್ಲಿಟ್ಟು ತನ್ನ ಮನೆಗೆ ಹೋದನು. ಆ ಕಲ್ಲು ಅನಾಥವಾಗಿ ಅಲ್ಲಿದ್ದುಕೊಂಡೇ ಗ್ರಾಮದ ಜನರಿಗೆ ಪರೋಕ್ಷವಾಗಿ ಒಳ್ಳೆಯದನ್ನು ಮಾಡತೊಡಗಿತು. ಜನರಿಗೆ ಈ ಕಲ್ಲಿನ ಮೇಲೆ ನಂಬಿಕೆಯುಂಟಾಗಿ ಅದನ್ನು ಅಲ್ಲಿಯೇ ಸ್ಥಾಪಿಸಿ ಪೂಜೆ ಪುನಸ್ಕಾರಗಳನ್ನು ಮಾಡತೊಡಗಿದರು.

ಜನರು ಹಳ್ಳದ ದಂಡೆಯಲ್ಲಿ ಬಹಳ ಹೊಲಸನ್ನು ಮಾಡತೊಡಗಿದಾಗ ಇತ್ತಿತ್ತಲಾಗಿ ಹಲವಾರು ವರ್ಷಗಳ ಹಿಂದೆ ಇಲ್ಲಿಂದ ಅಂದರೆ ಗ್ರಾಮದಿಂದ ನಾಲ್ಕು ಕಿ.ಮೀ ಅಂತರದ 'ಬಳಗಾನೂರ'ಎಂಬ ಗ್ರಾಮದ ರಸ್ತೆಯ ಬಲಬದಿಯಲ್ಲಿ ಒಂದು ದೇವಸ್ಥಾನವನ್ನು ಕಟ್ಟಿಸಿಕೊಟ್ಟರು. ಮೊದಲು ಈ ದೇವರು ಹಳ್ಳದ ದಂಡೆಯಿಂದ ಗ್ರಾಮದ ಉತ್ತರ ದಿಕ್ಕಿಗೆ ಶಿರಶ್ಯಾಡ ಗ್ರಾಮದ ಸೀಮೆಯಲ್ಲಿ ನೆಲೆನಿಂತಿತು. ಆಮೇಲೆ ಗ್ರಾಮದ ಮಧ್ಯದಲ್ಲಿ ನೆಲೆನಿಂತಿತು. ಈ ದೇವರನ್ನು ''ನರಸಿಂಹ'' ಎಂಬ ಇನ್ನೊಂದು ಹೆಸರಿನಿಂದಲೂ ಕರೆಯುತ್ತಾರೆ. ಈ ಹಿರೋಡೇಶ್ವರನು ಹಾಲುಮತದ ಸಮುದಾಯಕ್ಕೆ ಸೇರಿದನೆಂಬುವುದು ಅಲ್ಲಿನ ಸ್ಥಳೀಯರಿಂದ ತಿಳಿದು ಬರುತ್ತದೆ.

**ಜಾತ್ರೆ**

ಪ್ರತಿವರ್ಷ ದೀಪಾವಳಿ ಅಮಾವಾಸ್ಯೆಗೆ ಇವನ ಜಾತ್ರೆಯಾಗುತ್ತದೆ. ಜಾತ್ರೆಯು ಒಂದು ದಿವಸದಲ್ಲಿ ಜರುಗುತ್ತದೆ. ಇವನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿಕೊಂಡು ಪೂಜಾರಿಗಳು ಹೊತ್ತುಕೊಂಡು ಗ್ರಾಮದಲ್ಲಿನ ಎಲ್ಲಾ ಜಪನೆಗಳಿಗೆ ಹೋಗಿ ನೀರನ್ನು ಹಾಕಿಸಿಕೊಂಡು ಭಕ್ತರಿಗೆ ಆಶೀರ್ವಾದವನ್ನು ಮಾಡಿ ಮರಳಿ ದೇವಸ್ಥಾನಕ್ಕೆ ಬಂದು ಕೂಡುತ್ತಾನೆ.

ಇವರೆಲ್ಲರ ಕಾಲ ಕಾರ್ಯಗಳ ಕುರಿತಾಗಿ ನಿಖರವಾಗಿ ಹೇಳುವುದು ಕಷ್ಟದಾಯಕವೇ ಈ ಹಾಲುಮತದ ದೇವರುಗಳ ಪರಂಪರೆಯವರೆಲ್ಲರೂ ಸಂಪನ್ನ ವ್ಯಕ್ತಿಗಳು ಅತೀ ಮಾನವ ಶಕ್ತಿಯುಳ್ಳವರೆಂದೂ ಇಚ್ಛಾಮಂತ್ರದಿಂದ ಕ್ರಿಯಾಸಿದ್ಧಿಯನ್ನು ಪಡೆಯುವರೆಂದು ಹೇಳಲಾಗುತ್ತದೆ.

**೩.೮. ಬಳ್ಳೊಳ್ಳಿಯ ನಿಂಗರಾಯ ಅಜ್ಜ**

ಇಂಡಿ ತಾಲೂಕಿನ ಮತ್ತೊಂದು ಹಾಲುಮತ ದೇವಸ್ಥಾನ ''ಬಳ್ಳೊಳ್ಳಿ'' ಎಂಬ ಗ್ರಾಮದಲ್ಲಿದೆ. ನಿಂಗರಾಯನ ದೇವಸ್ಥಾನವು ಸದ್ಯ ಈಗ ಪ್ರಚಲಿತದಲ್ಲಿದೆ. ಈ ಗ್ರಾಮದಲ್ಲಿ ''ನಿಂಗರಾಯ'' ದೇವರು ಉದ್ಭವಿಸಿದ್ದು ''ಶಿರಶ್ಯಾಡ''ಎನ್ನುವ ಮನೆತನದವರಿಂದ. ಈ ನಿಂಗರಾಯ ಅಜ್ಜನ ವಂಶಜರು ಯಾತನೂರು, ಬಂದ್ಯಾಳ, ಶಿರಶ್ಯಾಡ, ಬೇನೂರು, ಹಲವಾರು ಗ್ರಾಮಗಳನ್ನು ಸಂಚರಿಸಿ ಕೊನೆಗೆ ಈ ಬಳ್ಳೊಳ್ಳಿ ಗ್ರಾಮದಲ್ಲಿ ಶಾಸ್ವತವಾಗಿದ್ದು ಬಿಟ್ಟರು. ನಿಂಗರಾಯ ಅಜ್ಜನು ಸುಮಾರು ೫೦೦, ೬೦೦ ವರ್ಷಗಳ ಹಿಂದೆ ಬದುಕಿದ್ದನೆಂದು ಇಲ್ಲಿನ ಸ್ಥಳೀಯರು ಹೇಳುತ್ತಾರೆ. ಈ ಗ್ರಾಮದ ಸ್ಥಳೀಯ ಕುರುಬರಿಗೂ ಮತ್ತು ಶಿರಶ್ಯಾಡ ಎನ್ನುವ ಮನೆತನದವರಿಗೂ ಈ ದೇವರು ನಮ್ಮದು ತಮ್ಮದು ಎಂದು ಇವತ್ತಿನವರೆಗೂ ಜಗಳಗಳು ಉಂಟಾಗಿದೆ. ಸದ್ಯಕ್ಕೆ ಈ ದೇವರ ಪೂಜಾಕಾರ್ಯಕ್ರಮವನ್ನು ಶಿರಶ್ಯಾಡ ಮನೆತನದವರೆ ಮುಂದುವರೆಯಿಸಿಕೊಂಡು ಹೊರಟಿದ್ದಾರೆ.

**ಜಾತ್ರೆ**

ಈ ನಿಂಗರಾಯ ಅಜ್ಜನ ಜಾತ್ರೆಯು ಪ್ರತಿವರ್ಷ ದೀಪಾವಳಿ ಹಬ್ಬಕ್ಕೆ ಜರುಗುತ್ತದೆ. ಈ ಅಜ್ಜನಿಗೆ ಜಾತ್ರೆಯಲ್ಲಿ ಸಜ್ಜಕವನ್ನು ಮಾಡಿ ನೈವೇದ್ಯವನ್ನು ಹಿಡಿದು ಜಾತ್ರೆಗೆ ಪಾಲ್ಗೊಂಡಿದ್ದ ಭಕ್ತಾದಿಗಳಿಗೆ ಮತ್ತು ಗ್ರಾಮದ

ಪ್ರಮುಖರಿಗೆ ಹಂಚುತ್ತಾರೆ. ಈ ಗ್ರಾಮದಲ್ಲಿ ಸುಮಾರು ೬೦೦-೭೦೦ ಮನೆಗಳು ಕುರುಬರದಾಗಿವೆ. ಈ ಗ್ರಾಮದಲ್ಲಿರುವ ಹಾಲುಮತದವರ ಮುಖ್ಯ ಉದ್ಯೋಗ ಒಕ್ಕಲುತನವೇ ಪ್ರಧಾನವಾಗಿದೆ. ಇಲ್ಲಿ ಯಾವುದೇ ಕಾಲುವೆ, ಕೆರೆಗಳಿಲ್ಲ ಮಳೆಯನ್ನೇ ನಂಬಿಕೊಂಡು ಈ ಗ್ರಾಮದ ಆರಾಧ್ಯ ದೈವನೆನಿಸಿದಂತಹ ನಿಂಗರಾಯ ಅಜ್ಜನ ಮೇಲೆ ಭಾರ ಹಾಕಿ ಬೇಸಾಯವನ್ನು ಮಾಡುತ್ತಿದ್ದಾರೆ.

ಈ ಬಳ್ಳೊಳ್ಳಿ ಗ್ರಾಮದಲ್ಲಿ ಹಾಲುಮತದ ಮೂರು ದೇವಸ್ಥಾನಗಳಿವೆ.

೧. ಬೀರಣ್ಣ ದೇವರ ಎರಡು ದೇವಸ್ಥಾನಗಳು

೨. ನಿಂಗರಾಯ ಅಜ್ಜನ ದೇವಸ್ಥಾನ

ಈ ಮೂರು ದೇವರಗುಳ ಮುಖಗಳನ್ನು ಪಲ್ಲಕ್ಕಿಯಲ್ಲಿಟ್ಟು ಒಟ್ಟಿಗೆ ಸೇರಿಸಿ ಬ್ರಹ್ಮ, ವಿಷ್ಣು, ಮಹೇಶ್ವರರಂತೆ ಪಲ್ಲಕ್ಕಿಯಲ್ಲಿ ಪ್ರತಿಷ್ಠಾಪಿಸಿದ್ದು ವಿಶೇಷವಾಗಿದೆ.

ಈ ನಿಂಗರಾಯ ಅಜ್ಜನ ಪೂಜಾರಿಗಳು ಕುರಿಗಳನ್ನು ಕಾಯುತ್ತಾ ''ಸಿದ್ಧಟಿಕೆ'' (ಪವಾಡಗಳ)ನ್ನು ಮಾಡುತ್ತಾ, ಮುಂದೆ ನಡೆಯಬಹುದಾದಂತಹ ಘಟನೆಗಳ ಮುನ್ಸೂಚನೆಯನ್ನು ಹೇಳತೊಡಗಿದುದರಿಂದ ಈ ಪೂಜಾರಿಗಳಿಗೆ (ಶಿರಶ್ಯಾಡ ಮನೆತನದವರಿಗೆ) ಗ್ರಾಮದಲ್ಲಿನ ಜನರು ''ದೇವರು'' ಎಂಬ ಹೆಸರಿನಿಂದ ಸಂಭೋಧಿಸುತ್ತಿದ್ದಾರೆ.

ಹಾಲುಮತದ ದೇವತೆಗಳು ಎಲ್ಲಾ ಮತ ಪಂಗಡಗಳ ಜನರ ಜೊತೆಗೆ ಬೆರೆತು ಎಲ್ಲರಿಗೂ ಒಳ್ಳೆಯದನ್ನು ಮಾಡುತ್ತಾ ಪ್ರಸಿದ್ಧಿಯನ್ನು ಹೊಂದಿದ್ದಾರೆ.

ಈ ಗ್ರಾಮದಲ್ಲಿ ಮತ್ತೊಂದು ಬಗೆಯ ಹಾಲುಮತದವರು ''ಮುಜಾವರ'' ಎಂಬ ಹೆಸರಿನಿಂದಲೂ ಕರೆಯಲ್ಪಡುತ್ತಿದ್ದಾರೆ ಎಂದು ಇಲ್ಲಿನ ಸ್ಥಳೀಯರ ಮಾತಿನಿಂದ ತಿಳಿದುಬರುತ್ತದೆ. ಈ ತಾಲೂಕಿನ ಹಾಲುಮತದ ಬಹಳಷ್ಟು ದೇವತೆಗಳು ಮತ್ತು ಪೂಜಾರಿಗಳು ತಮ್ಮ ಕಾಯಕವನ್ನು (ಕೆಲಸ) ಮಾಡುತ್ತಾ ಹಲವಾರು ಗ್ರಾಮಗಳನ್ನು ಸಂಚರಿಸುತ್ತಾ ಕೊನೆಗೆ ಒಂದು ಗ್ರಾಮದಲ್ಲಿ ನೆಲೆನಿಂತು ಕಾಯಕಯೋಗಿ ಎನಿಸಿಕೊಂಡಿದ್ದಾರೆ. ಈ ಹಾಲುಮತ ದೇವತೆಗಳ ಮೂಲ ಕಸುಬು ಕುರಿಗಳನ್ನು ಕಾಯುವ ವೃತ್ತಿಯನ್ನು ಅವಲಂಬಿಸಿದ್ದಾರೆ.

**೩.೯. ತಾಂಬಾದ ಗವಿಸಿದ್ಧೇಶ್ವರ**

ಇಂಡಿ ತಾಲೂಕಿನ ಮತ್ತೊಂದು ಹಾಲುಮತ ದೇವಸ್ಥಾನ ಈ ಗವಿಸಿದ್ದೇಶ್ವರರದು. ಈ ಗ್ರಾಮ ಇಂಡಿಯಿಂದ ೨೦ ಕಿ.ಮೀ. ದಕ್ಷಿಣ ದಿಕ್ಕಿಗೆ ಇದೆ. ಇವರಿಗೆ ''ನೆಲಮಳಿಗೆ ಸಿದ್ಧರು'' ಎಂದು ಕರೆಯುತ್ತಾರೆ. ಮುಮುಕ್ಷುಗಳಿಗೆ ಮುಕ್ತಾ ಪಲವಿತ್ತು ಸಕಲ ಭಕ್ತಾದಿಗಳು ಹೃದಯ ಮಂದಿರದಲ್ಲಿ ನಿರಂತರವಾಗಿ ಪೂಜೆಗೊಳ್ಳುತ್ತಿರುವವರು. ಅನಂತ ಪವಾಡ ಪುರುಷರಾದ ಪ್ರಭುಗಳು ಜೀವಂತ ಸಮಾಧಿಯನ್ನು ಹೊಂದಿದವರು ಇವರನ್ನು ನಂಬಿ ಕೆಟ್ಟವರಿಲ್ಲ ಇಂತಹ ವಿಶೇಷತೆಯನ್ನು ಹೊಂದಿದ ಶ್ರೀ ಗವಿಸಿದ್ದೇಶ್ವರ ದೇವಾಲಯು ಸರ್ವ ಧರ್ಮದ ಸಮನ್ವಯ ತಾಣವೆಂದು ಮುಕ್ತಿ ಮಂದಿರವೆಂದೂ ಪ್ರಸಿದ್ಧಿಯನ್ನು ಪಡೆದಿದೆ.

ಜಾತ್ರೆ

ಇಂತಹ ಮಹಾತ್ಮರ ಜಾತ್ರೆ ಪ್ರತಿವರ್ಷ ದೀಪಾವಳಿ ಅಮಾವಾಸ್ಯೆಗೆ ಜರುಗುತ್ತದೆ. ಅಂದು ಶ್ರೀಗವಿಸಿದ್ಧೇಶ್ವರರ ಮೇಲೆ ಹರಕೆ ಹೊತ್ತು ಒಂದು ತಿಂಗಳ ಕಾಲ ಭಕ್ತಾದಿಗಳು ಆಚರಿಸುತ್ತಾ ಬಂದು ಒಂದೊಂದು ವ್ರತವನ್ನು ಮುಕ್ತಾಯಗೊಳಿಸುವರು. ಈ ಉಪವಾಸವನ್ನು ಮಧ್ಯಾಹ್ನ ಹೊತ್ತಿನಲ್ಲಿ ಬಿಡುವುದೇ ವಿಶೇಷವಾಗಿದೆ. ಗವಿಸಿದ್ಧೇಶ್ವರರು ಆಂಧ್ರಪ್ರದೇಶದಿಂದ ಬಂದು ಇಲ್ಲಿನ ಕರೀಲಕ್ಷ್ಮೀಯ ಸೇವೆ ಮಾಡಿ ಆ ದೇವಿಯನ್ನು ಒಲಿಸಿಕೊಂಡು ತಾಂಬಾದ ಸುತ್ತಮುತ್ತಲೂ ಅನಂತ ಪವಾಡಗಳನ್ನು ಮಾಡಿ ಮೆರೆದವರಾಗಿದ್ದಾರೆ.

ಪವಾಡಗಳು

ಬೀದರದ ಸಿದ್ದವ್ವ ಎಂಬ ಭಕ್ತಳ ಮಕ್ಕಳು ಬಂಧನದಲ್ಲಿದ್ದಾಗ ಅಥವಾ ಸಂಕಷ್ಟದಲ್ಲಿದ್ದಾಗ ಗವಿಸಿದ್ಧೇಶ್ವರನ ಕುರಿತು ಪ್ರಾರ್ಥಿಸಿಕೊಂಡಾಗ ಅವಳ ಮಕ್ಕಳು ಬಿಡುಗಡೆಯಾಗಿ ಮನೆಗೆ ಬಂದರು ಎನ್ನುವಂತಹ ವಿಷಯವು ಇಲ್ಲಿನ ಸ್ಥಳೀಯರು ಸ್ಪಷ್ಟಪಡಿಸಿದರು.

ಶ್ರೀ ಗವಿಸಿದ್ಧೇಶ್ವರ, ನಂದರಾಯ, ಕರಿಲಕ್ಷ್ಮಿ, ಈ ಮೂರು ದೇವಸ್ಥಾನಗಳ ಪೂಜೆಯನ್ನು ಹಾಲುಮತದ ಪೂಜಾರಿಗಳೇ ಮಾಡಿಕೊಂಡು ಬಂದಿದ್ದಾರೆ. ಶ್ರೀ ಗವಿಸಿದ್ದೇಶ್ವರ ದೇವಸ್ಥಾನವು ಈ ತಾಂಬಾ ಗ್ರಾಮದ ಗ್ರಾಮ ದೇವತೆಯೆಂದು ಪ್ರಸಿದ್ಧಿ ಪಡೆದಿದೆ.

೩.೧೦. ಲಾಳಸಂಗಿ ಸಿದ್ಧರಾಯ ಅಜ್ಜ

ವಿಜಾಪೂರ ಜಿಲ್ಲೆಯ ಇಂಡಿ ತಾಲೂಕಿನ ಲಾಳಸಂಗಿ ಗ್ರಾಮವು ಅನೇಯ ಶತಮಾನದಲ್ಲಿ ರಾಷ್ಟ್ರಕೂಟರ ಕಾಲದಲ್ಲಿ ತಾಲೂಕಾ ಕೇಂದ್ರವಾಗಿತ್ತು. ಈ ಗ್ರಾಮಕ್ಕೆ ಪೂರ್ವ ಮತ್ತು ಉತ್ತರಕ್ಕೆ ಬೃಹತ್ತಾದ ಅಗಸಿ ಬಾಗಿಲುಗಳಿದ್ದ ಪುರಾವೆಗಳಿವೆ. ಆದರೆ ಅಳಿದು ಉಳಿದ ಭಾಗ ಪೂರ್ವದಿಕ್ಕಿಗೆ ಮಾತ್ರ ಉಳಿದುಕೊಂಡಿದೆ. ಈ ಗ್ರಾಮ ತಾಲೂಕಾ ಕೇಂದ್ರದಿಂದ ೨೦ ಕಿ.ಮೀ. ದೂರದಲ್ಲಿದೆ.

ಈ ಸಿದರಾಯನ ಮೂಲ ಗ್ರಾಮ ರಕ್ಕಸಗಿ-ತಂಗಡಗಿ ಆಗಿದೆ. ಈ ತಂಗಡಗಿ ಗ್ರಾಮದ ಗೌಡರ ಮನೆತನವು ಸರಕಾರದ ಯಾವುದೋ ಒಂದು ತೊಂದರೆಯಿಂದಾಗಿ ರಾತ್ರೋ-ರಾತ್ರಿ ಈ 'ಲಾಳಸಂಗಿ' ಗ್ರಾಮಕ್ಕೆ ಬಂದರು. ಈ ಊರಿಗೆ ಬಂದ ಬಳಿಕ ಗೌಡರು ಈ ಗ್ರಾಮಕ್ಕೆ ಬರಲು ಕಾರಣವೇನು? ಎಂದು ಜನರು ತಪ್ಪು ತಿಳಿಯುತ್ತಾರೆ ಎನ್ನುವ ಕಾರಣಕ್ಕಾಗಿ ಇವರು ''ವಾಲೀಕಾರ'' ಎನ್ನುವ ಹೆಸರಿನಿಂದ ಕರೆಯಿಸಿಕೊಂಡರು. ಮುಂದೆ ಈ ಮನೆತನದವರಿಗೆ ಇದೇ ಹೆಸರು ರೂಢಿಯಾಯಿತು. ಇವರು ಶುದ್ಧ ಶಾಖಾಹಾರಿಗಳು ಇವರ ಮನೆತನದವರು ''ಸಿದ್ಧಿ'' ಪುರುಷರಾಗಿ ಮುಂದುವರೆಯಿಸಿಕೊಂಡು ಬಂದಿದ್ದಾರೆ. ಇದರಿಂದ ಇವರ ಮೂಲದ ನೆನಪಿಗಾಗಿ ''ಸಿದರಾಯ'' ಎನ್ನುವ ದೇವರನ್ನು ನಿರ್ಮಾಣ ಮಾಡಿಕೊಂಡು ಆರಾಧನೆಯನ್ನು ಮಾಡುತ್ತಾ ಬಂದಿದ್ದಾರೆ. ಇದನ್ನು ನಿರ್ಮಾಣ ಮಾಡಿದ್ದು ಸುಮಾರು ಎರಡು ನೂರು ವರ್ಷಗಳ ಹಿಂದಿನದಾಗಿರುತ್ತದೆ.

ಈ ಸಿದರಾಯನ ಹೆಂಡತಿಯು ಹೆಸರು ''ಗ್ಯಾನಮ್ಮ''. ಇವನು ಮುಳ್ಳು ಬೇಲಿನ ಮೇಲೆ ನಡೆಯುತ್ತಾ ಅನೇಕ ಪವಾಡಗಳನ್ನು ಮಾಡುತ್ತಾ ಮೆರೆದನು. ಇವನು ಭವಿಷತ್ತಿನಲ್ಲಿ ಏನು ಹೇಳುತ್ತಾನೆಯೋ ಆದೇ ರೀತಿಯಾಗಿ

ಘಟನೆಗಳು ಜರುಗುತ್ತಿದ್ದವು. ಇವರ ಕಾಲಕ್ಕೆ ಒಂದು ಮನೆತನ ಲಾಳಸಂಗಿಯಲ್ಲಿ ಉಳಿದು ಇನ್ನೆರಡು ಮನೆತನಗಳು ನೆರೆಯ ಗೋಳಸಾರ ಗ್ರಾಮಕ್ಕೆ ಹೋದವು ''ಸಿದ್ಧಪ್ಪ''ನ ಮನೆತನವೇ ಲಾಳಸಂಗಿ ಗ್ರಾಮದಲ್ಲಿ ಉಳಿಯಿತು.

ಇನ್ನೊಂದು ಪ್ರತೀತಿಯ ಪ್ರಕಾರ ಈ ಸಿದರಾಯನು ಸೋಮನಾಳ ಗ್ರಾಮದಿಂದ ಕುಟುಂಬ ಸಮೇತನಾಗಿ ಈ ಗ್ರಾಮಕ್ಕೆ ಬಂದನು ಎಂದು ಇಲ್ಲಿನ ಸ್ಥಳೀಯರು ಹೇಳುತ್ತಾರೆ. ಅಂದರೆ ಈ ಕುಟುಂಬದ ಮನೆತನದ ಹೆಸರು ನಾಯಕೊಡಿ ಆಗಿದೆ. ಈ ನಾಯಕೊಡಿ ವಂಶಜರು ಇವತ್ತಿನವರೆಗೂ ಸಿದರಾಯನ ಪೂಜಾ ವಿಧಿಗಳನ್ನು ನೆರವೇರಿಸಿಕೊಂಡು ಬಂದಿದ್ದಾರೆ.

**ಸಿದರಾಯನ ಪವಾಡಗಳು**

ಶರಣ ಸಿದರಾಯನು ಸೋಮನಾಳದಲ್ಲಿದ್ದಾಗ ಕೆಲವೊಂದು ತಿಂಗಳು ಅಡವಿಯಲ್ಲಿ ತಪಸ್ಸು ಮಾಡುತ್ತಿರುವಾಗ, ಅಲ್ಲಿನ ಜನ ಬರಗಾಲದ ತೊಂದರೆಯಿಂದಾಗಿ ಮಳೆಯನ್ನು ಕಂಡಿರಲಿಲ್ಲ. ಆಗ ಗ್ರಾಮದ ಜನರು ಸಿದ್ಧರಾಯನ ಹತ್ತಿರ ಮೊರೆ ಹೋಗುತ್ತಾರೆ. ಆಗ ಅಜ್ಜನು ಇನ್ನು ಮೂರೆ ಗಂಟೆಗಳಲ್ಲಿ ಮಳೆ ಬರುತ್ತದೆ ನೀವೆಲ್ಲಾ ಗ್ರಾಮಕ್ಕೆ ಹೋಗಿ ಎಂದು ಕಳುಹಿಸುತ್ತಾನೆ. ಅಜ್ಜ ಹೇಳಿದ ಪ್ರಕಾರ ಮೂರೇ ಗಂಟೆಗಳಲ್ಲಿ ಮಳೆ ಬರುತ್ತದೆ. ಆಗ ಗ್ರಾಮದ ಮುಖಂಡನು, ಇಂತಹ ಪವಾಡ ಪುರುಷನನ್ನು ಗ್ರಾಮಕ್ಕೆ ಕರೆದುಕೊಂಡು ಹೋಗಿ ಆತಿಥ್ಯವನ್ನು ಮಾಡೋಣ ಎಂದು ನಿರ್ಧರಿಸಿ ಕರೆಯಲು ಹೋದಾಗ ಇವನು ಮುಳ್ಳಿನ ಬೇಲಿಯ ಮೇಲೆ ಓಡಾಡುತ್ತಾ ತನ್ನ ವಿಷಯ ತಿಳಿಸಿದ ''ಗಾಣಿಗ'' ಜಾತಿ ಈ ಗ್ರಾಮದಲ್ಲಿರದಂತೆ ಆಗಲಿ ಎಂದು ಹೇಳಿದ್ದಕ್ಕೆ ಸೋಮನಾಳ ಗ್ರಾಮದಲ್ಲಿ ಇನ್ನೂವರೆಗೂ ಕೂಡಾ ಗಾಣಿಗ ಸಮುದಾಯದವರಿಲ್ಲ. ಈ ಅಜ್ಜನು ಯಾಕೆ ಈ ರೀತಿ ಹೇಳಿದನೆಂಬುದು ಯಾರಿಗೂ ಸ್ಪಷ್ಟವಾಗಿ ಗೊತ್ತಿಲ್ಲ.

ಈ ಲಾಳಸಂಗಿ ಗ್ರಾಮದಲ್ಲಿ ಅನೇಕ ಮನೆತನದವರಿಗೆ ಮಕ್ಕಳ ಭಾಗ್ಯವಿಲ್ಲದವರಿಗೆ ಇವನನ್ನು ನಡೆದುಕೊಂಡವರಿಗೆ ಮಕ್ಕಳಾಗಿವೆ ಎಂಬ ನಂಬಿಕೆಯನ್ನು ತಾಳಿದ್ದಾರೆ. ಮಳೆ ಬೆಳೆಯ ಸಮೃದ್ಧಿಯನ್ನು ಕೊಟ್ಟು ಅನಂತ ಪವಾಡಗಳನ್ನು ಮಾಡಿ ತೋರಿಸಿ ಮೆರೆದಿದ್ದಾನೆ.

**ಜಾತ್ರೆ**

ಈ ಸಿದರಾಯ ಅಜ್ಜನ ಜಾತ್ರೆಯು ಯುಗಾದಿ, ದೀಪಾವಳಿ ಮತ್ತು ಸಂಕ್ರಮಣದಲ್ಲಿ ನಡೆಯುತ್ತದೆ. ಸಂಕ್ರಮಣ ಹಬ್ಬದ ಸಮಯದಲ್ಲಿ ದೇವರು ಪಲ್ಲಕ್ಕಿಯ ಸಮೇತ ''ಕೂಡಲ ಸಂಗಮ''ಕ್ಕೆ ಬರುತ್ತಾನೆ. ''ಹಿರಿಹಳ್ಳ-ಚಿಕ್ಕಹಳ್ಳ'' ಕೂಡಿದಲ್ಲಿ ಒಂದು ಸಂಗಮನಾಥನ ಹಳೆಯ ದೇವಲಯವಿದೆ. ಗೋಳಸಾರ, ಶಿವಪೂರ, ನಾದ, ಲಾಳಸಂಗಿ, ಖೇಡಗಿ ಮತ್ತು ಸಾತಲಗಾಂವ ಹೀಗೆ ಸುತ್ತಮುತ್ತಲಿನ ಗ್ರಾಮಗಳ ಜನರು ಶೀತನಿ ತೆನಿಗಳನ್ನು ಸುಟ್ಟು ತೆಗೆದುಕೊಂಡು ಬರುತ್ತಾರೆ. ಕಟ್ಟಿಕೊಂಡು ತಂದ ರೊಟ್ಟಿ(ಸಜ್ಜಿ), ಜೋಳದ ರೊಟ್ಟಿ, ಹುಳಬಾನ, ಹಿಂಡಿ, ಪಲ್ಯ ಇವುಗಳನ್ನೆಲ್ಲ ಊಟ ಮಾಡಿದ ಬಳಿಕ ಪೂಜಾರಿಗಳು ಮಳೆ ಬೆಳೆಯ ಬಗ್ಗೆ ಹೇಳಿಕೆಗಳನ್ನು ಹೇಳುತ್ತಾರೆ. ಎಲ್ಲಾ ಜನರು ಕಟ್ಟಿಕೊಂಡು ಬಂದ ಅಡುಗೆಯನ್ನು ಊಟವಾದ ಮೇಲೆ ಉಳಿದರೆ ಆ ವರ್ಷ ಸುಕಾಲ ಎಂತಲೂ ಎಲ್ಲಾ ಪದಾರ್ಥ ಖಾಲಿಯಾಗಿಬಿಟ್ಟರೆ ಆ ವರ್ಷ ಕಡಿಮೆ ಬೆಳೆ ಬರುತ್ತದೆ. ಎಂದು ಈ ರೀತಿಯಾಗಿ ಇಲ್ಲಿನ

ಜನರು ಮುಂದಿನ ಆಗು ಹೋಗುಗಳ ಬಗ್ಗೆ ನಂಬಿಕೆಯನ್ನು ಇಟ್ಟುಕೊಂಡಿದ್ದರು. ಹೀಗೆ ತೀರಾ ಸರಳವಾದ ರೀತಿಯಲ್ಲಿ ಸಿದರಾಯ ದೇವರ ಜಾತ್ರೆಯು ನಡೆಯುತ್ತದೆ.

**೩.೧೦. ಲಾಳಸಂಗಿ ಮಡ್ಡಿ ಸಿದ್ಧರಾಯ ಅಜ್ಜ**

ಇಂಡಿ ತಾಲೂಕಿನ ಲಾಳಸಂಗಿ ಗ್ರಾಮದ ಮತ್ತೊಂದು ಹಾಲುಮತ ದೇವಸ್ಥಾನ ಈ ಮರಡಿ ಸಿದರಾಯನದಾಗಿದೆ. ಇವನು ಮೂಲತಃ ಬಳಗಾನೂರ ಗ್ರಾಮದ 'ಕಂಬಳ್ಯಾನೂರ' ಎನ್ನುವ ಮನೆತನದವನಾಗಿದ್ದಾನೆ ಎಂದು ಇಲ್ಲಿನ ಜನರು ತಮಗೆ ಗೊತ್ತಿದ್ದ ಅಲ್ಪ ಸ್ವಲ್ಪ ಮಾಹಿತಿಯಲ್ಲಿ ಈ ವಿಷಯವನ್ನು ಪ್ರಸ್ತಾಪಿಸಿದ್ದಾರೆ. ಹಿಂದಿನ ಕಾಲದಲ್ಲಿ ಬಡತನ, ಬರಗಾಲ, ಬೇರೆ ಬೇರೆ ಸಂಕಷ್ಟ ಪರಿಸ್ಥಿತಿಯಲ್ಲಿ ಜನರಿಗೆ ತಮ್ಮ ಹೊಟ್ಟೆಯನ್ನು ತುಂಬಿಸಿಕೊಳ್ಳಲು ಆಗುತ್ತಿರಲಿಲ್ಲ. ಇಂತಹ ಸಂದರ್ಭದಲ್ಲಿ ಈ ದೇವರನ್ನು ಲಾಳಸಂಗಿ ಗ್ರಾಮದಲ್ಲಿ ಬಿಟ್ಟು ಹೋದಬಳಿಕ ಇದೇ ಗ್ರಾಮದಲ್ಲಿ ನೆಲೆನಿಂತನು. ಇದು ನಡೆದು ಸುಮಾರು ನೂರು ಇನ್ನೂರು ವರ್ಷಗಳ ಹಿಂದೆ ಈಗಿನ ಪೂಜಾರಿಯ ಹಿರಿಯರ ಕೈಯಲ್ಲಿ ಕೊಟ್ಟು ಬೇರೆ ಪ್ರದೇಶಕ್ಕೆ ವಲಸೆ ಹೋದರು ಎಂಬ ಮಾತನ್ನು ಇಲ್ಲಿನ ಸ್ಥಳೀಯರು ಹೇಳುತ್ತಾರೆ. ಹೆಚ್ಚಿಗೆ ಇನ್ನೂ ಆಳವಾಗಿ ಇಲ್ಲಿನ ಹಿರಿಯರಿಗೆ ಕೇಳಿದರೆ ಮನುಷ್ಯನ ನೆಲೆ ಗೊತ್ತಿಲ್ಲ. ದೇವರು ನೆಲೆ ನಮಗೆ ಹೇಗೆ ಗೊತ್ತಾಗಬೇಕು. ಹಿಂದಿನ ಹಿರಿಯರು ಅನುಸರಿಸಿಕೊಂಡು ಬಂದ ಆಚರಣೆಯನ್ನು ಮಾಡುತ್ತಾ ಬಂದಿದ್ದೇವೆ ಎಂದು ಸರಾಗವಾಗಿ ಉತ್ತರಿಸುತ್ತಾರೆ.

**ಜಾತ್ರೆ**

ಈ ಮಡ್ಡಿ ಸಿದರಾಯನ ಜಾತ್ರೆಯು ಎಲ್ಲಾ ಹಾಲುಮತದ ದೈವಗಳಂತೆಯೇ ದೀಪಾವಳಿ, ಯುಗಾದಿ ಅಮಾವಾಸ್ಯೆಗೆ ಪಲ್ಲಕ್ಕಿಗಳು ನದಿಗೆ ಹೋಗಿ ಗಂಗಾಸ್ನಾನ ಮಾಡಿಕೊಂಡು ಮನೆ ಮನೆಗಳಿಗೆ ತೆರಳಿ ಕಾಯಿ-ಕರ್ಪೂರಗಳನ್ನು ಮಾಡಿಸಿಕೊಂಡು ಮರಳಿ ದೇವಸ್ಥಾನದಲ್ಲಿ ಕೂಡುತ್ತವೆ. ದೇವಸ್ಥಾನದಲ್ಲಿ ಹತ್ತಿರ ಬಂದ ನಂತರ ಡೊಳ್ಳಿನ ವಾದ್ಯದ ನಾದಕ್ಕೆ ಕುಣಿದು ಪೂಜಾರಿಯ ಮೈಮೇಲೆ ದೇವರು ಬಂದು ಮಳೆ ಬೆಳೆಯ ಮುನ್ಸೂಚನೆಯನ್ನು ಹೇಳಲಾಗುತ್ತದೆ. ಹೆಚ್ಚಾಗಿ ಹಾಲುಮತದ ದೈವಗಳ ಜಾತ್ರೆಯು ತೀರಾ ಸರಳವಾದ ರೀತಿಯಲ್ಲಿ ಪಲ್ಲಕ್ಕಿಗಳ ಮೆರವಣಿಗೆಯೊಂದಿಗೆ ಮುಕ್ತಾಯವಾಗುತ್ತದೆ.

**೩.೧೧. ಮಿರಗಿಯ ಯಲ್ಲಪ್ಪ ಮಹಾರಾಜರು**

ಓಂ.

ಓಂ ಗುರುರ್ ಬ್ರಹ್ಮ

ಗುರುರ್ ವಿಷ್ಣು

ಗುರುದೇವೋ ಮಹೇಶ್ವರಾ

ಗುರುವೇ ಸಾಕ್ಷಾತ್ ಪರಬ್ರಹ್ಮಣೇ ನಮಃ

ತಸ್ಮೈಯ ಶ್ರೀ ಗುರುವೇ ನಮಃ

ಈ ಓಂಕಾರ ಮತ್ರಕ್ಕೆ ಭಾರತದಲ್ಲಿ ಸರ್ವರು ಮನ್ನಣೆ ನೀಡಿ ಗುರುಗಳನ್ನು ನೆನೆಯುತ್ತಿದ್ದಾರೆ. ಈ ಓಂಕಾರದಲ್ಲಿ ಪ್ರಮುಖ ಸ್ಥಾನ ಗುರುವಿಗಿದೆ. ಇಂತಹ ಓಂಕಾರ ಸ್ಥಾನ ಈಗ ಕರ್ನಾಟಕದ ಬಿಜಾಪೂರ ಜಿಲ್ಲೆಯ ಇಂಡಿ ತಾಲೂಕಿನ 'ಮಿರಗಿ' ಗ್ರಾಮದಲ್ಲಿ ಸರ್ವ ಸಮುದಾಯದ ಜನತೆಯಿಂದ ಶ್ರೀ ಯಲ್ಲಾಲಿಂಗ ಪ್ರಭುಗಳ ಮಠದಲ್ಲಿ ಕ್ರಿಯಾಶೀಲವಾಗಿರುವುದನ್ನು ಕಾಣಬಹುದು. ಇಂತಹ ಮಠದ ಒಡೆಯ ಶ್ರೀ ಯಲ್ಲಾಲಿಂಗ ಮಹಾರಾಜರು ಶತಾಯುಷಿಗಳಾಗಿ ತೊಟ್ಟಿಲಲ್ಲಿ ಜನತೆಯಿಂದ ತೂಗಿಸಿಕೊಂಡು ಶಿವನೆಡೆಗೆ ಹೋಗಿದ್ದು ಇತಿಹಾಸದ ಪುಟಗಳಲ್ಲಿ ಚಿರಸ್ಥಾಯಿಯಾಗಿದೆ. ಭಕ್ತರ ಉದ್ಧಾರಕ ಲೀಲಾ ಮೂರ್ತಿ ಅಗ್ನಿಸ್ಪಟಿಕ ಮಿರಗಿಯ ಒಡೆಯ ಯಲ್ಲಾಲಿಂಗ ಪ್ರಭುಗಳ ಸಂಕ್ಷಿಪ್ತ ಪರಿಚಯ ಇಲ್ಲಿದೆ. ವಿಶ್ವದಲ್ಲಿ ಅನೇಕ ಮಹಾತ್ಮರನ್ನು ವೀರರನ್ನು ಭಕ್ತರನ್ನು ಸಂತರನ್ನು ತಿಳಿದು ನೋಡಿದರೆ, ಅವರಿಗೆ ವೈರಾಗ್ಯ ಬಂದುದು ವಿಚಿತ್ರ ಸನ್ನಿವೇಶಗಳಲ್ಲಿ ಎಂಬುದು ಸುಸ್ಪಷ್ಟವಿದೆ. ಉದಾ: ಸಿದ್ಧಾರ್ಥನಿಗೆ ಮಧ್ಯರಾತ್ರಿಯಲ್ಲಿ ಹೆಂಡತಿ ಮಗುವನ್ನು ಬಿಟ್ಟು ವೈರಾಗ್ಯ ಬಂದರೆ, ನಿಜಗುಣ ಶಿವಯೋಗಿಗಳಿಗೆ ಕ್ಷೌರ ಮಾಡಿಸಿಕೊಳ್ಳುವಾಗ ವೈರಾಗ್ಯ ಬಂದಿದೆ. ವೇಮನನಿಗೆ ಸೂಳೆಯ ಮನೆಯಲ್ಲಿ ವೈರಾಗ್ಯ ಬಂದಿದೆ. ಕನಕದಾಸರಿಗೆ ಯುದ್ಧ ಭೂಮಿಯಲ್ಲಿ ವೈರಾಗ್ಯ ಬಂದರೆ, ಶ್ರೀಯಲ್ಲಾಲಿಂಗ ಪ್ರಭುಗಳಿಗೆ ಸ್ಮಶಾನದಲ್ಲಿ ವೈರಾಗ್ಯ ಬಂದಿತು. ಯಲ್ಲಾಲಿಂಗ ಪ್ರಭುವಿನ ಮೂಲ ಹೆಸರು ''ಯಲ್ಲಪ್ಪ'' ಎಂದು ನಾಮಕರಣ ಮಾಡಿದ್ದರು. ಇವರ ತಾಯಿಯ ಹೆಸರು ಕಾಶೀಬಾಯಿ ತಂದೆ ಶಿವಪ್ಪ, ಈ ಪುಣ್ಯ ದಂಪತಿಗಳು ಹಾಲುಮತದವರು ಆಗಿದ್ದು, ಶಿವಭಕ್ತರಾಗಿ ಸಂಸಾರವನ್ನು ಸಾಗಿಸಿಕೊಂಡು ಬಂದವರಾಗಿದ್ದಾರೆ.[೧]

**ಭೂಮಿಗಿಳಿದ ಶಿವರೂಪಿ**



ಶ್ರೀಮತಿ ಕಾಶೀಬಾಯಿ ಮತ್ತು ಶಿವಪ್ಪ ಎಂಬ ಪುಣ್ಯ ದಂಪತಿಗಳು ಈಗಿನ ಬಿಜಾಪೂರ ಜಿಲ್ಲೆಯ ಇಂಡಿ ತಾಲೂಕಿನ ''ಮಿರಗಿ'' ಎಂಬ ಚಿಕ್ಕ ಗ್ರಾಮದಲ್ಲಿ ಹಾಲುಮತ ಮನೆತನದ ಶಿವಭಕ್ತರಾಗಿದ್ದರು. ತಂದೆ ಶಿವಪ್ಪ ಕುರಿಕಾಯುವ ಕುಸ್ತಿ ಪಟುವಾಗಿದ್ದನು. ತಾಯಿ ಮನೆಗೆಲಸ ಪತಿಯ ಸೇವೆ, ಶಿವಪೂಜೆ, ಅನ್ಯರಿಗೆ ಸಹಾಯ ಇತ್ಯಾದಿ ಕಾಯಕ ನಿಷ್ಠೆಯನ್ನು ಪಡೆದವಳಾಗಿದ್ದಳು. ಈ ದಂಪತಿಗಳಿಗೆ ಬಹು ತಿಂಗಳುಗಳವರೆಗೆ ಮಕ್ಕಳ ಫಲ ದೊರಕಲಿಲ್ಲ. ತಾಯಿ ಕಾಶೀಬಾಯಿ ಮನೆತನದ ದೇವರಾದ ಜಟ್ಟಿಂಗರಾಯನಲ್ಲಿ ಪೂಜೆ ಸಲ್ಲಿಸಿ ನಮಸ್ಕಾರ ಮಾಡಿ ದಿನಾಲು ಸೇವೆ ಮಾಡುತ್ತಿದ್ದಳು ಬಡತನವಿದ್ದರೂ ಅವರಿಗೆ ಚಿಂತೆ ಇರಲಿಲ್ಲ. ಆದರೆ ಮಕ್ಕಳ ಚಿಂತೆ ಇವರಲ್ಲಿ ಬಲವಾಯಿತು. ಜಟ್ಟಿಂಗರಾಯನಿಗೆ ಅನನ್ಯ ಭಕ್ತಿಯಿಂದ ಪೂಜೆ ಸಲ್ಲಿಸುತ್ತಿದ್ದರು. ಇವರ ಭಕ್ತಿಯನ್ನು ಅರಿತು ಗುಡಿಯ ಪೂಜಾರಿ ತಮ್ಮಣ್ಣಪ್ಪ ಒಂದು ದಿನ ದಂಪತಿಗಳನ್ನು ಕರೆದು ನಿಮಗೆ ಎರಡು ಫಲಗಳಿವೆ. ಮೊದಲನೆಯವನನ್ನು ಜಟ್ಟಿಂಗರಾಯನ ಕೀರ್ತಿಗಾಗಿ ಬಿಡಬೇಕೆಂದನು. ಅವನ ಜಡೆ ತೆಗೆಯುವಾಗ ಐದು ಹೂವುಗಳನ್ನು ನೆತ್ತಿಯ ಮೇಲಿಟ್ಟು ಜಡೆ ತೆಗೆಯಬೇಕೆಂದನು. ಎರಡನೇಯವನನ್ನು ನಿಮ್ಮ ಸಂಸಾರದ ಕುಡಿಯನ್ನಾಗಿ ಬೆಳೆಯಿಸಿಕೊಳ್ಳಬೇಕೆಂದು ವಚನದಂತೆ ನುಡಿದನು.

ಪೂಜಾರಿಯ ವಚನ ಫಲಿಸಲು ಆರಂಭವಾಯಿತು. ಕ್ರಿ.ಶ. ೧೮೮೬ ಚೈತ್ರ ಮಾಸದಲ್ಲಿ ಶುಕ್ಲಪಕ್ಷ ರವಿವಾರ ರವಿ ಉದಯದ ವೇಳೆಯಲ್ಲಿ ಪುತ್ರ ಜನಿಸಿದನು. ಅವನಿಗೆ ಶಿವಶರಣರ ಶಿಸು ಸಂಸ್ಕಾರ ನೀಡಿಯಾಯಿತು. ಯಲ್ಲಪ್ಪ

ಬಾಲಕನಿರುವಾಗ ಕುರಿಕಾಯುವ ಕೆಲಸ ಗರಡಿಮನಿ ಕುಸ್ತಿ ಆಡುವ ಕೆಲಸ, ರಾತ್ರಿಯಲ್ಲಿ ಏಕಾಗ್ರ ಚಿತ್ತದ ಶಿವಧ್ಯಾನ ಮಾಡುವುದರಲ್ಲಿ ದಿನಾಲು ನಿರತನಾದನು. ಹೀಗೆ ಪ್ರೌಢಾವಸ್ಥೆಗೆ ಬಂದನು. ಇವನ ತಾಯಿ ಮದುವೆಗೆ ಒತ್ತಾಯ ಪಡಿಸುತ್ತಿದ್ದಳು. ಮದುವೆಯಾಗುವ ಮನಸ್ಸು ಇವನಿಗಿರಲಿಲ್ಲ. ಅದಕ್ಕೆ ತಾಯಿಯು ಮಗನೇ ಶಿವಶರಣರು ಸಂಸಾರ ಮಾಡಿ ಜಗದ ಕಲ್ಯಾಣ ಮಾಡಿದ್ದಾರೆ. ನೀನು ಹಾಗೆ ಮಾಡಿದರೆ ನಮಗೆಲ್ಲಾ ಸಂತೋಷ ಎಂದು ಒತ್ತಾಯ ಪಡಿಸಿದಳು.[೨]

ಹಿರಿಯರೆಲ್ಲಾ ಯಲ್ಲಪ್ಪನನ್ನು ಮದುವೆಗೆ ಒಪ್ಪಿಸಿ 'ಹೊನ್ನವ್ವ' ಎಂಬ ಕನ್ಯೆಯನ್ನು ಸಂಸಾರದ ಜೊತೆಗಾರ್ತಿಯನ್ನಾಗಿ ಮಾಡಿದರು. ದಿನಕಳೆದಂತೆ ಹನ್ನಪಳಿಗೆ ನವಮಾಸ ತುಂಬಿ ಹೆರಿಗೆಯಾಗುವುದಿತ್ತು. ಹೊನ್ನವ್ವ ತೀರಿಕೊಂಡಳು ಅತ್ಯಕ್ರಿಯೆಗೆ ಜನಸ್ತೋಮ ಸಾಗಿ ಶವಕ್ಕೆ ಅಗ್ನಿಸ್ಪರ್ಶವಾಯಿತು ಯಲ್ಲಾಲಿಂಗರು ಸುಡುವ ಅಗ್ನಿಯನ್ನು ಕಂಡು ಶರೀರಗಳೆರಡು ದಹಿಸುವುದನ್ನು ಕಂಡು ತನ್ನ ಆರು ಗುಣಗಳನ್ನು ಅಳಿದು ಅಲ್ಲಿನ ಬೂದಿಯನ್ನು ಮೈಗೆ ಬಡಿದುಕೊಂಡು ಜೈ ಸಿದ್ದಲಿಂಗಾ ಧ್ವನಿಗೈಯುತ್ತಾ ಲಚ್ಯಾಣ ಕಮರೀ ಮಠದ ದಾರಿ ಹಿಡಿದುಬಿಟ್ಟನು.

ಶ್ರೀ ಯಲ್ಲಾಲಿಂಗರು ವೈರಾಗ್ಯ ಮೂರ್ತಿ ಸ್ವರೂಪನಾದನು. ಲಚ್ಯಾಣ ಗ್ರಾಮದಲ್ಲಿ ಕಮರೀ ಮಠಕ್ಕೆ ಬಂದು ಸಿದ್ಧಲಿಂಗ ಮಹಾರಾಜರಿಗೆ ನಮಸ್ಕರಿಸಿದನು ಪಾದಗಳನ್ನು ಗಟ್ಟಿಯಾಗಿ ಹಿಡಕೊಂಡನು ಗುರುದೇವೋ ಭವ ಎಂಬುವುದನ್ನು ಅರಿತು ನನಗೆ ನೀನೇ ಗತಿಯೆಂದು ಬೇಡಿಕೊಂಡನು. ಯಲ್ಲಾಲಿಂಗನು ಗುರುವನ್ನು ಅನೇಕ ಸಲ ಬೇಡಿಕೊಂಡನು. ಭಕ್ತಿಪೂರ್ವಕವಾಗಿ ಸೇವೆ ಮಾಡಿದನು. ತನಗೆ ಗುರುವಿನ ಉಪದೇಶ ಬೇಕೆಂದು ಅಲ್ಲಿಯೇ ತಪಸ್ಸು ಮಾಡಿದನು. ಸಿದ್ಧಲಿಂಗ ಮಹಾರಾಜರು ಅವನನ್ನು ಅಗ್ನಿಪರೀಕ್ಷೆಯನ್ನು ಮಾಡಿದರು. ಕಠಿಣ ವ್ರತಗಳನ್ನು ಮಾಡಬೇಕೆಂದು ಹೇಳಿದರು. ಇದನ್ನು ತಪ್ಪಿದರೆ ನಿನ್ನನ್ನು ದಫನ (ನಾಶ) ಮಾಡುತ್ತೇನೆಂದರು. ಯಲ್ಲಾಲಿಂಗರು ಮೂರು ವರ್ಷಗಳವರೆಗೆ ಕಠಿಣ ವ್ರತ, ಕಠಿಣ ಸೇವೆಮಾಡಿ ಗುರುಗಳ ಆಶೀರ್ವಾದ ಪಡೆದನು. ಯಲ್ಲಾಲಿಂಗನೇ ನೀನು ಇಲ್ಲಿಂದ ಎರಡು ನದಿಗಳನ್ನು ದಾಟಿ ಸಂಚಾರ ಮಾಡುತ್ತಾ ಭಕ್ತರನ್ನು ಉದ್ಧಾರ ಮಾಡುತ್ತಾ ಯಾವುದೇ ಹಳ್ಳಿಯ ಸ್ಮಶಾನದಲ್ಲಿ ಮಠವನ್ನು ಕಟ್ಟಿಸು. ಅದು ಶಿವಸ್ಥಾನವಾಗುತ್ತದೆ. ಅಲ್ಲಿ ಭಕ್ತರನ್ನು ನೀನೇ ಉದ್ಧಾರ ಮಾಡು ಎಂದು ಹರಸಿ ಕಳುಹಿಸಿದರು.[೩]

### ಶ್ರೀ ಯಲ್ಲಾಲಿಂಗರ ಸಂಚಾರ

ಶ್ರೀ ಯಲ್ಲಾಲಿಂಗರು ಕಾವಿಯನ್ನು ಗುರುಗಳಿಂದ ಪಡೆದು ಸಾಧುವೇಷ ತೊಟ್ಟು ಭಕ್ತರಿಗೆ ಕಾಯಕದ ಉಪದೇಶವನ್ನು ನೀಡುತ್ತಾ ಜಾತ್ರೆಗಳನ್ನು ಮಾಡುತ್ತಾ ಅಗ್ನಿಕುಂಡಗಳನ್ನು ರಚಿಸುತ್ತಾ ಕುಂಡದಲ್ಲಿ ನಡೆದಾಡುತ್ತಾ ಪವಾಡ ಸದೃಶ್ಯವಾಗಿ ತೋರುತ್ತಿದ್ದರು.

''ಕರ್ಜಗಿ'' ಎಂಬ ಗ್ರಾಮದಲ್ಲಿ ಭೂತ, ಪಿಶಾಚಿಗಳ ಉಪಟಳ. ಜನರಿಗೆ ಅನೇಕ ರೋಗ ರುಜಿನಗಳ ಪೀಡೆಗಳ ಹೊಡೆತ, ಮೂಢತನದ ಹೊಡೆತ ಇತ್ಯಾದಿಗಳಿಂದ ಕಂಗಾಲಾಗಿದ್ದರು. ಅಲ್ಲಿ ಯಲ್ಲಾಲಿಂಗರು ವಾಸಮಾಡಿ ಅವುಗಳೆಲ್ಲ ದೂರ ತೊಲಗುವಂತೆ ಕಾಯಕನಿಷ್ಠ ಜ್ಞಾನ ಪ್ರಸಾರ ಮಾಡಿ ಶುಭ, ಶಾಂತಿಗಳನ್ನು ನೀಡಿ ಜನಮನಗಳನ್ನು ಜಾಗೃತಗೊಳಿಸಿದರು.

## ಜನರಿಗೆ ಉಪದೇಶಾಮೃತ

ಯಲ್ಲಾಲಿಂಗ ಮಹಾರಾಜರ ಉಪದೇಶಗಳಿಂದ ಜನ ಸುಖದ ದಾರಿ ಕಂಡುಕೊಂಡರು. ಶರೀರ, ಮನ, ಮನೆ, ಹೊಲ ಸ್ವಚ್ಛವಾಗಿಡಲು ಜನರಿಗೆ ತಿಳಿಸುತ್ತಿದ್ದರು. ಕಾಯಕ ಪ್ರತಿಯೊಬ್ಬರಿಗೆ ಅಗತ್ಯವೆಂದು ಹೇಳುತ್ತಿದ್ದರು. ಜಾತಿ, ಭೇದ, ಮಾಡುವಂತಿಲ್ಲ ಹೊಲಸು ತಿನ್ನುವುದು. ಹೊಲಸು ಮಾತನಾಡುವುದು. ಜನರಲ್ಲಿ ಇರಕೊಡದು. ಪ್ರತಿ ಸಂಸಾರಿಗಳು ಹಾಸಿಗೆ ಇದಷ್ಟು ಕಾಲು ಚಾಚಬೇಕು. ಶಿವನ ಧ್ಯಾನ ತಪ್ಪದೇ ಮಾಡಬೇಕು. ಗುರುವನ್ನು ಕಂಡುಕೊಳ್ಳಬೇಕು. ಸಂಸಾರದಲ್ಲಿದ್ದು ಸುಖಸಾಧಿಸಿ ಮುಕ್ತನಾಗಬೇಕು ಇತ್ಯಾದಿ ಉಪದೇಶಗಳನ್ನು ನೀಡುತ್ತಿದ್ದರು. ಹಿಂದೂ ಮುಸಲ್ಮಾನರೆಂಬ ಭೇದ ಭಾವ ಆಗುವಂತಿರಲಿಲ್ಲ. ಎಲ್ಲರೂ ಒಂದೇ ಎಂದು ಮಾನವ ಧರ್ಮದ ಕೀರ್ತಿ ಅದೊಂದೇ ಎನ್ನುತ್ತಿದ್ದರು. ಅಕ್ಕಲಕೋಟೆ ತಾಲೂಕಿನ ತಹಶೀಲ್ದಾರ ಹುದ್ದೆಯಲ್ಲಿದ್ದ ಖಾಸಿಂ ಸಾಹೇಬನು ಯಲ್ಲಾಲಿಂಗ ಮಹಾರಾಜರ ಜೊತೆ ವಾದಿಸಿ ಅವರಿಂದಲೇ ಆಶೀರ್ವಾದಪಡೆದುಕೊಂಡು ಅರಿವಿಗೆ ಬಂದು. ತನ್ನ ನೌಕರಿಗೆ ರಾಜೀನಾಮೆ ನೀಡಿ ಅವರಿಂದ ಗುರುಉಪದೇಶ ಪಡೆದು ಖಾಸಿಂ ಸಾಹೇಬನು ಕಾಶೀನಾಥ ಮಹಾರಾಜನೆಂದು ಕಾವಿತೊಟ್ಟನು. ಬಳಿಕ ಮಹಾರಾಷ್ಟ್ರದ ಉಸ್ಮಾನಾಬಾದ ಜಿಲ್ಲೆಯ ರಾಮವಾಡಿಯಲ್ಲಿ ತ್ರಿವಿಧ ದಾಸೋಹ ಮೂರ್ತಿ ಎಂದು ಹೆಸರುವಾಸಿಯಾದನು.[9]

ಶ್ರೀ ಯಲ್ಲಾಲಿಂಗರು ಸಂಚಾರದಲ್ಲಿ ಎಲ್ಲೆಲ್ಲಿ ಇರಲಿ ಲಕ್ಷ್ಮೀ ತಾನಾಗಿಯೇ ಅವರೆಡೆಗೆ ಬರತೊಡಗಿದಳು. ಇದು ಕಲಿಯುಗ, ಕಲಿತನದಿಂದ ಶಿವಮಂತ್ರವನ್ನು ನುಡಿಯುತ್ತಾ ಕಾಯಕ ದರ್ಶನ ಮಾಡುತ್ತಾ ಸಂಚರಿಸುತ್ತಿದ್ದರು. ಕಾಯಕ ಮಾಡದೇ ಯಾರು ಊಟ ಮಾಡಕೂಡದು ಎಂದು ಕಟ್ಟಪ್ಪಣೆ ಮಾಡಿದರು. ಮುಗಳಖೋಡದಲ್ಲಿ ಮಠ ಸ್ಥಾಪಿಸಿದ ಮೇಲೆ ಕಾಯಕ ನಿಷ್ಠೆ, ಶಿವನಿಷ್ಠೆ ಇವರ ಮಂತ್ರಗಳಾದವು. ಯಲ್ಲಾಲಿಂಗರು ಸ್ವತಃ ಗುದ್ದಲಿ, ಸಲಿಕೆ, ಬುಟ್ಟಿ ಹಿಡಿದು ಹನ್ನೆರಡು ವರ್ಷಗಳವರೆಗೆ ಕೃಷಿ ಮತ್ತು ಕಟ್ಟಡದ ಕೆಲಸ ಮಾಡಿದರು.

ಮಠಕ್ಕೆ ಬಂದ ಭಕ್ತರಿಗೆಲ್ಲಾ ಪ್ರಸಾದದ ವ್ಯವಸ್ಥೆ ಶಿವಮಂತ್ರದ ನುಡಿ. ಶರಣರ ಹಿತವಚನ, ಮಾನವ ಜಾತಿ ಒಂದು ಎಲ್ಲರು ಶಿವನ ಮಕ್ಕಳು, ಅನ್ನದ ಋಣ, ದೇವರ ಋಣ, ಗುರುವಿನ ಋಣ ಇವುಗಳನ್ನು ಅರಿತು ಸಾಗಿರಿ. ನಿಮ್ಮಿಂದ ಅನ್ನದಾಸವಾಗಲಿ, ತಂದೆ-ತಾಯಿ, ಗುರು ಹಿರಿಯರಿಂದ ಜ್ಞಾನ ಪಡೆಯಿರಿ. ಹೀಗೆ ಹೋದಲೆಲ್ಲಾ, ಒಂದೇ ಸವನೆ ತಿಳಿಯಪಡಿಸುತ್ತಿದ್ದರು.

## ಯಲ್ಲಾಲಿಂಗರ ಕೀರ್ತಿ

ಇವರು ಮೊದಲು ಭಕ್ತರು ಕರೆದಲೆಲ್ಲಾ ಎತ್ತಿನಗಾಡಿಗಳಲ್ಲಿ ಸಂಚರಿಸುತ್ತಿದ್ದರು. ಭಕ್ತರು ಕರೆದ ಸ್ಥಳಕ್ಕೆ ಹೋಗುತ್ತಿದ್ದರು. ಶಿವಮಂತ್ರ ಶಿವನ ರೂಪ ಶಿವನ ಅವತಾರ ಯಲ್ಲಾಲಿಂಗರೆಂದು ಕೀರ್ತಿಗೆ ಪಾತ್ರರಾದರು. ಅನೇಕ ಪವಾಡಗಳ ಸಾಕ್ಷಿಯಾಗಿ ಮಕ್ಕಳ ಪ್ರಾಣಗಳನ್ನು ರಕ್ಷಿಸಿದ. ರೋಗಿಗಳನ್ನು ನಿರೋಗಿಗಳನ್ನಾಗಿ ಮಾಡಿದ ಬೇಡಿಕೆಗಳು ಈಡೇರುವಂತೆ ಮಾಡಿದ ಯಲ್ಲಾಲಿಂಗರು ಭಕ್ತರ ಏಳ್ಗೆಗಾಗಿ ಹಗಲು ರಾತ್ರಿಯೆನ್ನದೆ ಕಾರ್ಯೋನ್ಮುಖರಾದರು. ಜನರು ಪ್ರತಿ ವರ್ಷ ಯಲ್ಲಾಲಿಂಗರ ಜಾತ್ರೆಯನ್ನು ರಾಮನವಮಿಯೆಂದು ಆಚರಿಸುತ್ತಾ ಸಾಗಿದರು.

ದಕ್ಷಿಣ ಭಾರತದಲ್ಲಿ ಯಲ್ಲಾಲಿಂಗರೆಡೆಗೆ ಜನ ಏಕಾಗ್ರ ಚಿತ್ತದಿಂದ ಬರತೊಡಗಿದರು. ಮುಕ್ತಿಯ ದಿನಗಳು ಸಮೀಪವಾಗಿದೆಂದು ಭಕ್ತರಿಗೆಲ್ಲಾ ತಿಳಿಸಿದರು. ಇವರಿಗೆ ನೂರು ವರ್ಷ ತುಂಬಿದಾಗ ಅಂದರೆ ಶನಿವಾರ ೨೫.೧.೧೯೮೭ರಂದು ಬನದ ಹುಣ್ಣಿಮೆಯ ದಿನ ಶಿವಯೋಗಿ ಯಲ್ಲಾಲಿಂಗರನ್ನು ತೊಟ್ಟಿಲಲ್ಲಿ ಹಾಕಿ ತೂಗಿದರು. ಇವರು ತಾವು ಜೀವ ಸಮಾಧಿಗಾಗಿ ಕಟ್ಟಿದ ಮಂದಿರದೊಳಗೆ ಪ್ರವೇಶಿಸಬೇಕೆಂದರು."

### ೩.೧೨. ಪುಂಡಲಿಂಗ ಶಿವಯೋಗಿಗಳು

ಸಂತರ ಶರಣರ ಹಾಗೂ ದಾಸರ ವಚನ ವಾಙ್ಮಯವನ್ನು ಮಥಿಸಿ ಸಾಹಿತ್ಯ ಸೌಂದರ್ಯವನ್ನು ಅನೇಕ ಕವಿಶ್ರೇಷ್ಠರು ಪ್ರಕಟಿಸಿಬರೆ, ತತ್ವ ಸೌಂದರ್ಯವನ್ನು ಸಾಕ್ಷಾತ್ಕಾರಗೊಳಿಸಿದವರು ವರವಿರಕ್ತರನೇಕರು. ಆದರೆ ಗುರು ವಿರಕ್ತರ ಮಟ್ಟವನ್ನು ಏಕ ಕಾಲಕ್ಕೆ ಏರಿ ಮಹಾನ್ ಸತ್ಪುರುಷರೆಂಬು ಮೆರೆತು ಮಹಾ ಜ್ಞಾನಿಗಳು ಅವತರಿಸಿದ್ದು ಅತ್ಯಂತ ವಿರಳ. ಇಂಥ ಅಪೂರ್ವ ಅನುಪಮ ಅವತಾರ ಶ್ರೇಷ್ಠರಾಗಿ, ಸತ್ಯ, ಧರ್ಮಗಳ ಸಾಕಾರ ಮೂರ್ತಿಯಾಗಿ, ಮಾನವ ಕುಲಕ್ಕೆ ಯುಗಪುರುಷರಾಗಿ ಮೆರೆದ ಪರಂಪರೆ ಗೋಳಸಾರದ (ತಾ: ಇಂಡಿ, ಜಿ: ವಿಜಾಪೂರ) ಶ್ರೀ ಪುಂಡಲಿಂಗ ಮಹಾರಾಜರು. ದೇವರಿಗೂ ಬಾರದ ರೀತಿಯಲ್ಲಿ ಬೆಳಗಿದ ೨೦ನೇ ಶತಮಾನದ ಈ ಅಲೌಕಿಕ ಬ್ರಹ್ಮಜ್ಞಾನಿಗಳಾದ ಗೋಳಸಾರದ ಪುಂಡಲಿಂಗರ ಕೀರ್ತಿ ಪ್ರಭೆಯು ನಾಡಿನುದ್ದಗಲಕ್ಕೂ ತುಂಬಿಕೊಂಡಿದೆ. ಮಾನವ ಕುಲಕೋಟಿಯ ಬದುಕು ಭಾವನೆಗಳನ್ನು ತಿದ್ದಿ ತೀಡಿ ಆಗು ಹೋಗುಗಳನ್ನರಿತು ಸತ್ಯ, ಶಾಂತಿ, ನೀತಿ, ಮಂತ್ರ ಬೋಧಿಸುತ್ತಾ ಆಚರಿಸುತ್ತಾ ಭಕ್ತಬಳಗವನ್ನು ಕೃಪಾದೃಷ್ಟಿಯಿಂದ ಉದ್ಧರಿಸುತ್ತ ಬಂದ ಘನತೆ ಈ ಪುಂಡಲಿಂಗೇಶ್ವರರ ಪರಂಪರಾಶ್ರಮಕ್ಕೆ ಸಲ್ಲುತ್ತದೆ.

ಪೂರ್ವಾರ್ಜಿತ ಕರ್ಮಗ್ರಹಣ ಫಲದಿಂದ ಮಾನವನು ರೋಗಗ್ರಸ್ಥನಾಗಿ ಅನೇಕ ಭಯಂಕರ ಭವ ಬಾಧೆಗಳಿಂದ ಇಹ ಜೀವನದಲ್ಲಿ ಬಳಲುತ್ತಿದ್ದಾನೆ. ಇದಕ್ಕೆ ದೇವಭಕ್ತರೂ ಹೊರತಿಲ್ಲ. ಇಂಥ ಅಗಣಿತ ಭಕ್ತ ಬಳಗವನ್ನು ಭವ ಭಾಷೆಗಳಿಂದ ರಕ್ಷಿಸಿ ಉದ್ಧರಿಸಿದ್ದಾರೆ. ಇದೊಂದು ಪರಮ ಪವಿತ್ರವಾದ ಅಪೂರ್ವದಾಖಲೆ ಇಂಥ ಪರಮ ಪೂಜ್ಯ ಗುರುವರರೂ, ಮಹಾನ್ ಸತ್ಪುರುಷರೂ ಭವ್ಯ ಬ್ರಹ್ಮಜ್ಞಾನಿಗಳೂ, ಭಕ್ತರ ಜೀವರೂ ಆದ ಪುಂಡಲಿಂಗರು ಜ್ಞಾನದೀಪವೂ, ದಾರಿ ದೀಪವೂ ಆಗಿದ್ದಾರೆ. ಸತ್ಯ ವಸ್ತುವು ಪ್ರಚಾರ ರಹಿತವಾಗಿ ಸೃಷ್ಟಿಯ ಆದಿಮೂಲವಾಗಿ ವೇದವಾದ ಜ್ಞಾನ ತರ್ಕಾದಿಗಳಿಗೂ ನಿಲುಕದ ಅಚಿನದ್ದು ಆಗಿರುತ್ತದೆ.

ಪುಂಡಲಿಂಗ ಮಹಾರಾಜರು ವರಗುರು ಮಂತ್ರ ಕೃಪೆಯಿಂದ ಇಳೆಗೆ ಅವತರಿಸಿ ಬಂದ ಹುಟ್ಟು ಬ್ರಹ್ಮಜ್ಞಾನಿಗಳು ಸೋತವರ ಕಡೆ ಶಿವ ಎಂಬಂತೆ ಎಂದಿಗೂ ಬರಗಾಲ ಪೀಡಿತ ಪ್ರದೇಶವೆಂದು ಹೆಸರಾದದ್ದು, ಕರ್ನಾಟಕದಲ್ಲಿ ಬಿಜಾಪೂರ ಜಿಲ್ಲೆಯ ಇಂಡಿ ತಾಲೂಕಿನ ಗೋಳಸಾರ ಪುರದಲ್ಲಿ ಪುಂಡಲಿಂಗ ಮಹಾರಾಜರು ಅವತಾರ ಕೃಪೆಯ ಲೋಕದ ದೀನ ಜನಸ್ತೋಮ ಉದ್ಧಾರಕ್ಕೆಂದಾಯಿತು. ಇವರು ಸಂಚಾರ ರಹಿತ ಅಪರಿಮಿತ ತಪಸ್ಸನ್ನಾಚರಿಸಿದವರು. ಹರಿ-ಹರ-ಬ್ರಹ್ಮ ತ್ರೀಮೂರ್ತಿರೂಪ ಅಪೂರ್ವ ಅಲೋಕಿಕ, ಸತ್ಯ, ಶಾಂತಿ, ನೀತಿಗಳ, ಸಾಕಾರ, ಮೂರ್ತಿಗಳೇ ಪುಂಡಲಿಂಗ ಶಿವಯೋಗಿಗಳು, ಸರ್ವ, ನೀತಿ, ತತ್ವ, ದೇವತ್ವಗಳು ಪುಂಡಲಿಂಗರ ರೂಪದಲ್ಲಿ ಭೂಮಿಗೆ ಅವತರಿಸಿ ಬಂದು ಅವರಿಂದಲೇ ಪ್ರತ್ಯೇಕವಾಗಿ ಯಾವತ್ತೂ ಆಚರಿಸ್ಪಟ್ಟವು. ತಮ್ಮಲ್ಲಿಗೆ ಬಂದಭಕ್ತ ಜನರನ್ನು ದರ್ಶನ

ಮಾತ್ರದಿಂದಲೇ ಅವರನ್ನು ಉದ್ಧರಿಸಿ ಕಾಪಾಡುತ್ತಿದ್ದರು. ಅವರನ್ನು ಸ್ಪರ್ಶಿಸಿ ನಮಸ್ಕರಿಸುವಂತಿರಲಿಲ್ಲ. ನಿರ್ಜೀವ ಜಡ ವಸ್ತುಗಳನ್ನು ಮುಟ್ಟದ ಅವರು ಜೀವಿಗಳನ್ನು ಮುಟ್ಟಿಸಿಕೊಳ್ಳುವುದಂತೂ ಬಹುದೂರದ ವಿಷಯ, ಭಕ್ತರು ದೂರದಿಂದಲೇ ಒಮ್ಮೆ ನಮಿಸಿದರೆ ಪುಂಡಲಿಂಗರು ಅನೇಕ ಬಾರಿ ಪುನಃ ವಂದಿಸುತ್ತ ಸರ್ವರ ನಮಸ್ಕಾರಗಳೂ ಆ ಪ್ರಭುವಿಗೆ (ಶಿವನಿಗೆ) ಮುಟ್ಟಲಿ ಎನ್ನುತ್ತಿದ್ದರು. ಇವರ ಇರುವಿಕೆಯೇ ಅಲೌಕಿಕವಾಗಿತ್ತು.

''ವಿಶ್ವವೇ ಒಂದು ಮನೆ ಸಮಸ್ತ ಮಾನವ ಕುಲವೇ ಒಂದೇ ಕುಂಟುಂಬ'' ಎಂಬ ಮಹಾತತ್ತ್ವವನ್ನು ನಿಜ ಅನುಷ್ಠಾನಕ್ಕೆ ತಂದ ಕೀರ್ತಿಯು ಪುಂಡಲೀಗರದಾಗಿದೆ. ಪುಂಡಲಿಂಗರು ''ಹಾಲುಮತ'' (ಕುರುಬರ) ಧರ್ಮದ ಮುಖಾಂತರ ಇಳೆಗೆ ಅವತರಿಸಿ ಬಂದರು. ಹಾಲುಮತ ಧರ್ಮವು ಹಾಲಿನಷ್ಟೇ ಉತ್ಕೃಷ್ಟ ಉದಾತ್ತ ಶ್ರೇಷ್ಠವಾದ ಪವಿತ್ರ ಪ್ರಾಮಾಣಿಕ ಧರ್ಮವೆಂದು ಪರಿಗಣಿಸಿ ಮೆರೆಯುತ್ತಿದೆ. ಅಡಿನಹಿಕ್ಕಿಯಲ್ಲಿ ಶಿವಸಾಕ್ಷಾತ್ಕಾರ ಪಡೆದ ಗೊಲಗೇರಿ (ತಾ: ಸಿಂದಗಿ)ಯ ಶ್ರೀಗೊಲ್ಲಾಳರಿಗೂ ಕವಿರತ್ನ ಕಾಳಿದಾಸರಿಗೂ ಮಿರಗಿಯ ಎಲ್ಲಪ್ಪಮಹಾರಾಜರಿಗೂ ಶರಣ ಶರಣೆಯರನೇಕರಿಗೂ, ಅವತಾರ ವಿತ್ತ ಪರಮ ಪಾವನ ಧರ್ಮ ಪರಂಪರೆಯೂ ಹಾಲುಮತ ಧರ್ಮಕ್ಕಿದೆ. ಕುರುಬರ ಬೋಣಿಗೆಯು ಶುಭವನ್ನೂ ಯಶಸ್ಸನ್ನೂ ದಯಪಾಲಿಸುವುದೆಂಬ ಸಂಕಲ್ಪವೂ ಇಂದಿಗೂ ಸಮಾಜದ ರೂಢಿಯಲ್ಲಿ ಗೌರವಿಸಲ್ಪಡುತ್ತಿದೆ. ಎಲ್ಲ ಧರ್ಮ, ಜಾತಿ, ಮತ, ಪಂಥ, ಪ್ರದೇಶದವರೂ ಸಾಧು ಸಂತರೂ, ಸನ್ಯಾಸಿಗಳೂ, ವಿರಕ್ತರೂ ಮತ್ತು ಜೀವನದ ಎಲ್ಲ ಕ್ಷೇತ್ರಗಳಲ್ಲಿರುವವರೂ ಪರಮ ಪೂಜ್ಯ ಪುಂಡಲಿಂಗ ಮಹಾರಾಜರ ಪ್ರಭಾವಕ್ಕೆ ಒಳಗಾಗಿ ಮೆಚ್ಚಿಕೊಂಡು ಅವರ ಬಳಗದ ಬಂಧುಗಳಾಗಿದ್ದಾರೆ.

### ಪುಂಡಲಿಂಗೇಶ್ವರರ ಪವಾಡಗಳು

''ದೀಪಾವಳಿಗೆ ಬಿಳಿ ಜೋಳ ಬಿತ್ತಿ ಬೆಳೆದದ್ದು'' ಸದಾಚಾರ ಸಂಪನ್ನರೂ ಆದ ಪುಂಡಲಿಂಗರು ತಮ್ಮೆಡೆಗೆ ಬಂದ ಭಕ್ತಾದಿಗಳಿಗೆ ಸತ್ಕರಿಸಿ ಆನಂದ ಪಡುತ್ತಿದ್ದರು. ಜನರು ಒಮ್ಮೆ ಬಿತ್ತಲಿಕ್ಕೆ ಮೂಹೂರ್ತ ಕೇಳಿದರು. ಸುತ್ತಮುತ್ತಲಿನ ಹಳ್ಳಿಗರಿಗೆ ಮೂಹೂರ್ತ ಹೇಳಿದರು. ಆದರೆ ತಮ್ಮ ಹೊಲದಲ್ಲಿ ಬಿತ್ತಲಿಕ್ಕೆ ಹೇಳಲಿಲ್ಲ. ನೆರೆಹೊರೆಯ ರೈತರೆಲ್ಲಾ ತಮ್ಮ ತಮ್ಮ ಹೊಲಗಳಲ್ಲಿ ಬಿತ್ತಿದ ಬಿಳಿ ಜೋಳವು ಸೊಗಸಾಗಿದೆ. ಕಳೆ ಕೀಳುವುದು, ಎಡೆ ಹೊಡೆಯುವುದು, ಎಲ್ಲ ಕೆಲಸಗಳು ಸಾಗಿದವು. ಆದರೆ ಪುಂಡಲಿಂಗರು ತಮ್ಮ ಹೊಲವನ್ನು ಬಿತ್ತಿಸದೆ ಹಾಗೆಯೇ ಜಮೀನು ಪಾಡು ಕೆಡವಿದರಲ್ಲಾ! ಇಂದೆಂಥಾ ಮಾತು? ಎಂದು ಎಲ್ಲ ರೈತರು ತಮ್ಮ ತಮ್ಮೊಳಗೆ ಯೋಚನಾ ಪರರಾದರು. ಅಲ್ಲದೆ ಯಾವಾಗಲಾದರೂ ಹೇಳಲಿ. ಅವಾಗ ಬಿತ್ತಿ ಬಂದರಾಯಿತು ಎಂದು ನಿಶ್ಚಯಿಸಿಕೊಂಡರು.

ಮುಂದೆ ದೀಪಾವಳಿಗೆ ಬಿತ್ತಲು ತಮ್ಮ ಹೊಲದಲ್ಲಿ ಮುಹೂರ್ತ ಹೇಳಿದರು. ಕಾಯ್ದುಕುಳಿತ್ತಿದ್ದ ನೆರೆಹೊರೆಯ ರೈತರು ಸುತ್ತ ಮುತ್ತಲಿನ ಹಳ್ಳಿಗಳ ರೈತರು ಇಪ್ಪತ್ತು ಮೂವತ್ತು ಕೂರಿಗೆಗಳನ್ನು ಸಂಗ್ರಹಿಸಿ ೨-೩ ಗಂಟೆಯೊಳಗಾಗಿ ಬಿತ್ತುವ ಕಾರ್ಯಮುಗಿಸಿದರು. ಮುಂದೆ ಬಿತ್ತಿದ ಬೀಜವು ಚೆನ್ನಾಗಿ ಮೊಳೆತು ಹೊರಬಿದ್ದು ಹುರುಪಿನ ಸಸಿ ಭರಾಟೆಯಿಂದ ಬೆಳೆಯಲಾರಂಭಿಸಿತು. ಈ ಬೆಳೆಯು ಸಾಕಷ್ಟು ಚೀಲಗಳ ಸಂಗ್ರಹವಾಯಿತು. ಇದು ೧೯೭೯ರ ಸಾಲಿನ ದೀಪಾವಳಿಗೆ ಬಿತ್ತಿ ಬೆಳೆ ಮಾಡಿದ್ದು ಗೋಳಸಾರ ಅಲ್ಲದೆ ಸುತ್ತ ಮುತ್ತಲಿನ ಗ್ರಾಮಗಳ ಜನರಿಗೆ ತಿಳಿದು ಆಶ್ಚರ್ಯವಾಯಿತು.

(ಬರಗಾಲದ ಮುನ್ಸೂಚನೆ ತೋರಿಸಿದ್ದು ಮತ್ತೊಂದು ಸಲ ಈ ಘಟನೆ ಜರುಗಿತು. ಇದು ೧೯೭೨-೭೩ನೆ ಸಾಲಿನಲ್ಲಿ ಸಾಮಾನ್ಯರಿಗೆ ತಿಳಿಯದ ಹಾಗೇ ಭೂಮಿಯ ಮೇಲೆ ಕ್ಷಾಮವೆಂಬ ಭೂತವು ನಾಟ್ಯ ಮಾಡಲಾರಂಭಿಸಿತು. ಕರುಣಾಮಯಿ ಮೂರ್ತಿಯಾದ ಪುಂಡಲಿಂಗೇಶನ ಆಶ್ರಮಕ್ಕೆ ಜನ ತಂಡೋಪತಂಡವಾಗಿ ಬರಲಾರಂಭಿಸಿದರು)

**ಲವಣದಂತಿದ್ದ ನೀರು ಸಿಹಿ ಮಾಡಿದ್ದು**

ಪುಂಡಲಿಂಗೇಶರು ಪ್ರತಿನಿತ್ಯ ಮೀಯುತ್ತಿರುವ ಬಾವಿ ಕೇವಲ ಒಂದೇ ಒಂದು. ಅದನ್ನು ಬಿಟ್ಟು ಬೇರೆ ಯಾವ ಬಾವಿಯಲ್ಲಾಗಲೀ ಹಳ್ಳದಲ್ಲಾಗಲೀ ಎಲ್ಲಿಯೂ ಸ್ನಾನ ಮಾಡುತ್ತಿರಲಿಲ್ಲ. ನಿಯಮದಂತೆ ಪುಂಡಲಿಂಗರು ಸ್ನಾನ ಮಾಡುತ್ತಿರುವ ಆ ಬಾವಿಯ ನೀರು ಮೊದಲು ಉಪ್ಪಿನಂತಿದ್ದವು. ಆ ತೋಟದ ಮಾಲೀಕನು ಜಮೀನಿಗೆ ಮಾತ್ರ ಆ ನೀರನ್ನು ಉಪಯೋಗಿಸುತ್ತಿದ್ದನು. ಮತ್ತು ಯಾವುದಕ್ಕೂ ಉಪಯೋಗಿಸುತ್ತಿರಲಿಲ್ಲ. ಹೀಗೆ ಯಾರಿಗೂ ಮುಟ್ಟಗೊಡದೆ ಇದ್ದ ಆ ಬಾವಿಯ ನೀರು ತಾನೇ ತಾನಾಗಿತ್ತು. ಈ ರೀತಿಯಿಂದಿದ್ದ ಆ ನೀರಿನಲ್ಲಿ ಪುಂಡಲಿಂಗರು ಪ್ರತಿನಿತ್ಯ ಸ್ನಾನಮಾಡುವುದರಿಂದ, ತಮ್ಮ ದಿವ್ಯದೃಷ್ಟಿ ಬೀರುವುದರಿಂದ ಆ ಬಾವಿಯ ನೀರು ತನ್ನದೇ ಆದ ಲವಣಾಂಶ ಕಳೆದುಕೊಂಡು ತನ್ನ ಬಿಟ್ಟುಹೋಗಿರುವ ಕೌಟುಂಬಿಕ ನಿವಾಸಿಗಳಿಗೆ ಸಮೀಪದಲ್ಲಿ ಬರಮಾಡಿಕೊಂಡು ತಾನು (ಆ ನೀರು) ಸಿಹಿಯಾಗಿ ಸರ್ವಕ್ಕೂ ಉಪಯೋಗಿಸಲು ಯೋಗ್ಯವೆನ್ನಿಸಿಕೊಂಡಿತು. ಹೀಗೆ ಗುರು ಪುಂಡಲಿಂಗರು ಈ ಕಲಿಯುಗದಲ್ಲಿ ಮಹಾತ್ಮ ಪುರುಷರೆಂದು ಜನರಿಗೆ ಕಷ್ಟಕಾರ್ಪಣೆಗಳಿಗೆ ಸ್ಪಂದಿಸುತ್ತಿದ್ದರು.

**೩.೧೩. ಜಗನ್ಮಾತಾ ಭಾಗೀರತಿ ದೇವಿ**

ಇಂಡಿ ತಾಲೂಕಿನ ಗೋಳಸಾರ ಗ್ರಾಮದಲ್ಲಿ ಮತ್ತೊಂದು ಹಾಲುಮತ ಸ್ತ್ರೀದೇವತೆಯಾದ ಭಾಗೀರತಿ ದೇವಿಯು ಶಕ್ತಿ ಸ್ವರೂಪಿಣಿ. ಶಾಂತಿ ಸಹನೆಗಳ ಮಂತ್ರವನ್ನು ಸದಾ ಜಪಿಸುತ್ತಾ ಗೋಳಸಾರ ಗ್ರಾಮದಲ್ಲಿ ಶ್ರೀ ಯೋಗವದೇ ಪುಂಡಲಿಂಗರ ಸಹ ಧರ್ಮಿಣಿಯಾದ ಭಾಗೀರತಿ ಎಂಬ ನಾಮದಿಂದ ಅವತರಿಸಿ ಅನಂತ ಲೀಲೆಗೈಯುತ್ತಾ ೧೯೫೫ ಮೇ ೧೩ನೇ ತಾರೀಖಿನಂದು ಭೂಲೋಕವನ್ನು ತ್ಯಜಿಸಿ ಅಖಂಡ ಪ್ರಕಾಶರಾದರು. ಇವರ ಬಗ್ಗೆ ಯಾವುದೇ ಪವಾಡಗಳ ರೀತಿಯಿಂದ ಮೆರೆದವರಾಗಿಲ್ಲ. ಪುಂಡಲಿಂಗ ಶಿವಯೋಗಿಗಳ ಸಹ ಧರ್ಮಿಣಿ ಎಂಬ ಕಾರಣಕ್ಕಾಗಿ ''ಮಾತೋಶ್ರೀ'' ಎಂಬ ಬಿರುದನ್ನು ಜನ ಸಾಮಾನ್ಯರಿಂದ ಗಳಿಸಿ ಜನರ ಕಷ್ಟ-ಸುಖಗಳಿಗೆ ಸ್ಪಂದಿಸುತ್ತಾ ಇದ್ದರು ಎಂದು ಇಲ್ಲಿನ ಸ್ಥಳೀಯರು ವಿವರಿಸಿದ್ದಾರೆ.

**ಜಾತ್ರೆ**

ಶ್ರೀ ಭಾಗೀರತಿ ದೇವಿಯ ಜಾತ್ರ ಜೂನ್ ತಿಂಗಳಲ್ಲಿ ಕಾರ ಹುಣ್ಣಿಮೆಯ ಸಮಯದಲ್ಲಿ ನಡೆಯುತ್ತದೆ. ಈ ಸಂದರ್ಭದಲ್ಲಿ ಸುತ್ತ ಮುತ್ತಲಿನ ಗ್ರಾಮಗಳಿಂದ ಭಕ್ತಾದಿಗಳು, ಭಜನಾ ಮಂಡಳಿಗಳು ಬಂದು ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುತ್ತಾರೆ. ನಂತರ ಭಾಗೀರತಿದೇವಿಯ ರಥಕ್ಕೆ ಮಹಾರುದ್ರಾಭಿಷೇಕ ಪೂಜೆ ಪ್ರಾರಂಭಗೊಂಡು ಬೆಳಿಗ್ಗೆ ದೇವಾಸ್ಥಾನದ ಪಲ್ಲಕ್ಕಿಯ ಸಮೇತ ಗಂಗಾಸ್ನಾನ ಮಾಡಿಸಿಕೊಂಡು ದೇವಾಲಯಕ್ಕೆ ಮರುಳುವುದು. ಕುಂಭಾಭಿಷೇಕ, ರುದ್ರಾಭಿಷೇಕ, ಬಿಲ್ವಾರ್ಚನೆ ನಡೆಯುವುದು. ದೇವಿಯ ಶಿರೋಭಾಗಕ್ಕೆ ಸುಮಂಗಲೆಯರಿಂದ ಸುವರ್ಣ ದಂಡೆ ಯಸ್ನು ಮುಡಿಸುತ್ತಾರೆ. ಭಕ್ತಾದಿಗಳಿಗೆ ಪ್ರಸಾದ ವಿತರಣೆ ಜಂಗಮಾರಾಧನೆ

ನಡೆದು ಕೊನೆಗೆ ಸಾಯಂಕಾಲದ ಹೊತ್ತಿನಲ್ಲಿ ರಥವನ್ನು ಎಳೆದು ತುಂಬಾ ಸರಳವಾದ ರೀತಿಯಲ್ಲಿ ಶ್ರೀ ಭಾಗೀರತಿ ದೇವಿಯ ಜಾತ್ರೆಯು ಕೊನೆಗೊಳ್ಳುವುದು.

### ೩.೧೪. ತಾಂಬಾದ ಲಕ್ಷ್ಮೀದೇವಿ

ಇಂಡಿ ತಾಲೂಕಿನ ತಾಂಬಾದ ಗ್ರಾಮದಲ್ಲಿನ ಮತ್ತೊಂದು ಹಾಲುಮತ ದೇವಸ್ಥಾನ ಲಕ್ಷ್ಮೀ ದೇವಾಲಯವಾಗಿದೆ. ಹಾಲುಮತದ ಶ್ರೀ ದೇವತೆಗಳು ಉಗ್ರ ಸ್ವರೂಪದವುಗಳಾಗಿವೆ. ಸ್ಥಳೀಯರೇ ಅವುಗಳ ಪೂಜಾರಿಗಳಾಗಿರುವುದು ಕಂಡುಬರುತ್ತದೆ. ಜನರಲ್ಲಿ ಅವುಗಳ ಬಗೆಗೆ ಭಯದ ಜೊತೆಗೆ ಆರಾಧನೆಯ ಗಟ್ಟಿ ನಿಲುವು ಆಗಿದೆ. ಎಮ್ಮೆ ಕರುಹಾಕಿದರೆ ಅದು ಮಾರಿಯ ಜಾತ್ರೆಯ ಮೀಸಲು ಕೋಳಿ ಹಿಂಡಿನಲ್ಲಿಯ ಹಿರಿಯ ಹುಂಜ ಮಾರಿಯ ಬಲಿಗೆ, ರಾಸಿ ಮಾಡಿದ ಕಾಳು ಗ್ರಾಮದೇವತೆಯ ಉಡಿತುಂಬಲಿಕ್ಕೆ ಎಮ್ಮೆ, ಹಸು, ಕರು ಹಾಕಿದಾಗ ಮೊದಲು ಗಿಣ್ಣ, ಹಾಲು ದೇವಿಗೆ ಸಲ್ಲಬೇಕು ಎಂಬ ಆಚರಣೆಗಳು ಇಂದೂ ಸಹ ನಮ್ಮ ನಡುವೆ ಇವೆ. ಅಂತಹ ಗ್ರಾಮದೇವತೆಗಳ ಮಹಿಮೆಯನ್ನು ತಮ್ಮದೇ ಆದ ಜನಪದ ಭಾಷೆಯಲ್ಲಿ ಸಾರುವ ಕಥಾನಕವಾಗಿ ವರ್ಣಿಸಬಲ್ಲ ಜನ ಇಂದು ಹಳ್ಳಿಗಳಲ್ಲಿ ಇದ್ದಾರೆ.

ಶ್ರೀ ಲಕ್ಷ್ಮಿದೇವಿಯು ತಾಂಬಾ ಗ್ರಾಮದ ಗೌಡರ ಮಗಳು ಅಂದರೆ ಮಾಳಿಂಗರಾಯನ ಎರಡನೇ ಹೆಂಡತಿ ಎಂಬ ಪ್ರತೀತಿ ಇದೆ. ಮಾಳಿಂಗರಾಯನು ಗುಡಿಸಲಲ್ಲಿ ಊಟಕ್ಕೆ ಕುಳಿತಿರಲು ಇವನ ಹೆಂಡತಿಯಾಗಿರತಕ್ಕಂತಹ ಲಕ್ಷ್ಮಿದೇವಿ ಹಳ್ಳಕ್ಕೆ ಹೋಗಿ ನೀರು ತರುವಾಗ ಮುಂದೆ 'ಏಕದಂಡಿ ಪದಮ್ಮಣ್ಣ'ನ ಹಿಂಡು ಹೊರಟಿತ್ತು. ಅವಳು ಆ ಕಡೆಗೆ ದೃಷ್ಟಿ ಬೀರಿ ನನ್ನ ಗಂಡನಿಗಿಂತ ಸಾಹಸದಲ್ಲಿ ಹೆಚ್ಚಾಗಿದ್ದಾನೇನೋ ಎಂದು ನೋಡುವಷ್ಟರಲ್ಲಿ ಇದನ್ನು ತಿಳಿದ ಮಾಳಿಂಗರಾಯನು ಇವಳು ಬೇರೆ ಪುರುಷನ ಕಡೆಗೆ ಲಕ್ಷ್ಯವಹಿಸಿದ್ದನ್ನು ನೋಡಿ ಅವಳನ್ನು ಬಿಡುಗಡೆಗೊಳಿಸಿದನು. ನಂತರ ಲಕ್ಷ್ಮಿದೇವಿಯು ತಾಂಬಾ ಗ್ರಾಮದಲ್ಲಿಯೇ ನೆಲೆನಿಂತು ಗ್ರಾಮದ ಜನರ ಜೀವನದಲ್ಲಿ ಪ್ರತಿಯೊಂದು ಕಾರ್ಯದಲ್ಲಿ ಮಳೆ-ಬೆಳೆ, ರೋಗ-ರುಜಿನ, ಶಾಂತಿ, ಆಸ್ತಿ-ಪಾಸ್ತಿ, ಮದುವೆ, ಮಕ್ಕಳು ಎಲ್ಲದರಲ್ಲೂ ಭಾಗವಹಿಸಿ ವಿವಿಧ ಬಗೆಯ ಹರಕೆಗಳನ್ನು ಈಡೇರಿಸುತ್ತಾ ಬಂದಿದ್ದಾಳೆ.

### ಜಾತ್ರೆ

ಯುಗಾದಿ, ದೀಪಾವಳಿ ಅಮಾವಾಸ್ಯೆಗೆ ಶ್ರೀಲಕ್ಷ್ಮೀದೇವಿಯ ಜಾತ್ರೆ ನಡೆಯುತ್ತದೆ. ಈ ದೇವಸ್ಥಾನದ ಮತ್ತೊಂದು ವಿಶೇಷವೆಂದರೆ ಯಾರಿಗಾದರೂ ಭಕ್ತಾದಿಗಳಿಗೆ ಒಳ್ಳೆಯದಾಗಿದೆ ಎಂದು ತಿಳಿದು ದೇವಿಯನ್ನು ನಂಬಿಕೊಂಡು ಹರಕೆಯನ್ನು ಸಿಡಿ ಆಡುವ ರೂಪದಲ್ಲಿ ತೀರಿಸಿಕೊಳ್ಳುತ್ತಾರೆ. ಈ ಲಕ್ಷ್ಮೀದೇವಾಲಯದ ಮುಂದೆ 'ಸಿಡಿ ಬಂಡಿ' ಇದೆ. ಇದಕ್ಕೆ ಮೊದಲು ಆರು ಗಾಲಿಗಳಿದ್ದವು. ಒಮ್ಮೆರಥ ಹೂಡಿಕೊಂಡು ಹೋಗುವಾಗ ಯಾವುದೋ ಒಂದು ಜಾಗದಲ್ಲಿ ಎರಡು ಗಾಲಿಗಳು ಉಳಿದುಕೊಂಡವು, ಮುಂದೆ ಅದೇ 'ಘತ್ತರಗಿ'ಗ್ರಾಮವೆಂದು ಪ್ರಚಲಿತವಾಯಿತು. ತಾಂಬಾ ಲಕ್ಷ್ಮಿದೇವಿಯ ದೇವಸ್ಥಾನದಲ್ಲಿ ನಾಲ್ಕು ಗಾಲಿಗಳು ಮಾತ್ರ ಉಳಿದವು.

ಯುಗಾದಿ, ಅಕ್ಕಿದಿ, ಬಾದಾಮಿ, ಅಮವಾಸ್ಯೆಯವರೆಗೆ ಸತತವಾಗಿ ಮೂರು ತಿಂಗಳವರೆಗೆ ಇಲ್ಲಿ ಸಿಡಿಯಾಡುವ ಪದ್ಧತಿ ಆಚರಣೆಯಲ್ಲಿದೆ. ಮತ್ತು ದೀಪಾವಳಿ ಅಮಾವಾಸ್ಯೆಗೆ ಮಾತ್ರ ಪಲ್ಲಕ್ಕಿ ಮೆರವಣಿಗೆಯಾಗುತ್ತದೆ.

ಮಹಾನವಮಿ ಅಮಾವಾಸ್ಯೆಗೆ ಗ್ರಾಮದ ಹಿರಿಯರು-ಕಿರಿಯರು ಎಲ್ಲಾ ಸೇರಿ ಲಕ್ಷ್ಮಿದೇವಿಯ ದೇವಸ್ಥಾನದ ಮುಂದೆ ಬನ್ನಿ ಮುಡಿಯುವ ಕಾರ್ಯಕ್ರಮವನ್ನು ಕೈಗೊಳ್ಳುತ್ತಾರೆ. ದೀಪಾವಳಿಗೊಮ್ಮೆ ಒಂದು ತಿಂಗಳವರೆಗೆ ಉಪವಾಸವನ್ನು ಕೈಗೊಂಡು ದೇವಿಯ ಕೃಪೆಗೆ ಪಾತ್ರರಾಗುತ್ತಾರೆ. ಈ ದೇವಸ್ಥಾನದ ಜೀರ್ಣೋದ್ಧಾರ ಸುಮಾರು ಇಪ್ಪತ್ತು, ಮೂವತ್ತು ವರ್ಷಗಳ ಹಿಂದೆ ಆಗಿದೆ. ಹೀಗೆ ಇಂಡಿ ತಾಲೂಕಿನಲ್ಲಿ ಹಾಲುಮತ ದೈವಗಳ ಮೂಲ, ಆಚರಣೆ, ಸಂಪ್ರದಾಯಗಳನ್ನು ಈ ಅಧ್ಯಯದಲ್ಲಿ ವಿಶ್ಲೇಷಣೆಗಳು ನೀಡಲಾಗಿದೆ.

* * *

## ಅಧ್ಯಾಯ ನಾಲ್ಕು

# ಹಾಲುಮತ ದೈವಗಳ ನಂಬಿಕೆಗಳು ಮತ್ತು ಆಚರಣೆಗಳು

## ಅಧ್ಯಾಯ ನಾಲ್ಕು

## ಹಾಲುಮತ ದೈವಗಳ ನಂಬಿಕೆಗಳು ಮತ್ತು ಆಚರಣೆಗಳು

### ಪ್ರಸ್ತಾವನೆ

ಪ್ರಾಚೀನ ಕಾಲದಿಂದಲೂ ಮಾನವ ತನ್ನ ಬದುಕಿನ ಉನ್ನತ ಶ್ರೇಯಸ್ಸಿಗಾಗಿ ಅಥವಾ ರೋಗ ನಿವಾರಣೆಗಾಗಿ ಇಲ್ಲವೇ ತನ್ನ ದಿನನಿತ್ಯದ ಕಾರ್ಯಚಟುವಟಿಕೆಗಳು ಸುಗಮವಾಗಿ ನಡೆಯುವಂತೆ ತನಗೆ ಸಂಬಂಧಿಸಿದ ಅಗೋಚರ ಶಕ್ತಿ ಆರಾಧನೆಯಲ್ಲಿ ಪೂಜಾ ವಿಧಿ-ವಿಧಾನಗಳು, ಜಾತ್ರೆ-ಉತ್ಸವಗಳು ನಂಬಿಕೆ ಮತ್ತು ಆಚರಣೆಗಳ ಆಧಾರದ ಮೇಲೆ ಮಾಡುತ್ತಾ ಬಂದಿರುತ್ತಾನೆ. ನಂಬಿಕೆ ಮತ್ತು ಆಚರಣೆಗಳು ಮಾನವನ ಆರೋಗ್ಯವನ್ನು ಕಾಪಾಡುವುದಲ್ಲದೇ ಅವುಗಳು ಪ್ರತಿಯೊಂದು ಗುಂಪು ತನ್ನ ಹತೋಟಿಯಲ್ಲಿ ಇಟ್ಟುಕೊಂಡು ಕೊಂಡೊಯ್ಯುತ್ತದೆ. ನಂಬಿಕೆ-ಆಚರಣೆಗಳು ಸಂಕೇತ, ಕುಲದೇವರ ಆರಾಧನೆಗಳು ಮೇಲೆ ರೂಪುಗೊಂಡಂತವುಗಳಾಗಿವೆ. ನಂಬಿಕೆ-ಆಚರಣೆಗಳು ಮನುಷ್ಯನ ದಿನನಿತ್ಯದ ಬದುಕಿನ ಎರಡು ಮುಖಗಳು ನಂಬಿಕೆ ಮಾತಿನ ಮೂಲಕ ವ್ಯಕ್ತಿಗೆ ಸ್ಫೂರ್ತಿ ನೀಡಿದೆ. ಆಚರಣೆಗಳು ಕ್ರಿಯೆಯ ಮೂಲಕ ವಿಶಿಷ್ಟಸ್ಥಾನವನ್ನು ಪಡೆದುಕೊಳ್ಳುತ್ತದೆ.[೧] ಈ ರೀತಿಯಾಗಿ ರೂಪಿತವಾದ ಸಂಸ್ಕೃತಿಯನ್ನು ಗಮನಿಸಿದಾಗ ಡಾ.ಹಾ.ಮಾ.ನಾಯಕರ ಮಾತು ನೆನಪಿಗೆ ತರುತ್ತದೆ. 'ಮನುಷ್ಯ ಕಾಲದ ನಡುವೆ ಸಿಕ್ಕು ಬಾಳುತ್ತಾನೆ'.[೨] ಮತ್ತು ದೇಶದ ನಡುವೆ ಸಿಕ್ಕಿ ಬಾಳುತ್ತಾನೆ.

ಮಾನವನು ನಿತ್ಯ ಜೀವನಕ್ಕೆ ಪ್ರಕೃತಿ ನೀಡುವ ಬೆಳಕು, ಗಾಳಿ, ನೀರು, ಆಹಾರ, ಬಟ್ಟೆ ಬರೆಗಳು ಎಷ್ಟು ಅವಶ್ಯವೋ, ನಂಬಿಕೆಗಳು ಕೂಡಾ ಅಷ್ಟೇ ಪ್ರಮುಖ ಪಾತ್ರವಹಿಸುತ್ತವೆ. ಜನಪದರಲ್ಲಿ ನಂಬಿಕೆಗಳು ಬಹಳ ಪ್ರಾಚೀನ ಕಾಲದಿಂದ ಇರುವುದನ್ನು ಕಾಣಬಹುದು. ಮಾನವನು ವಿಕಾಸಗೊಂಡಂತೆ ಆತನ ಜೀವನದಲ್ಲಿ ಭಾಷೆ -ಭಾವನೆಗಳ ಉಗಮದೊಂದಿಗೆ ನಂಬಿಕೆಗಳೂ ಕೂಡಾ ಅದರೊಂದಿಗೆ ಪರ್ಯಾಯವಾಗಿ ಬೆಳೆದು ದಿನನಿತ್ಯದ ಕ್ರಮಗಳನ್ನು ಬೆಳೆಸುವಷ್ಟರ ಮಟ್ಟಿಗೆ ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ''ನಂಬಿಕೆ ಒಂದು ಮಾನಸಿಕ ಸ್ಥಿತಿ ಪರಂಪರರಾಗತವಾಗಿ ಸ್ವೀಕೃತವಾದ ಒಂದು ಭಾವರೂಪ ಪುನರಾವೃತ್ತೀತ ಮತ್ತು ಸಾಂಪ್ರದಾಯಿಕ ಅಭಿಪ್ರಾಯೋಕ್ತಿ ವಸ್ತುಸ್ಥಿತಿಯೊಡನೆ ಅಸಂಬದ್ಧವೂ, ಅವೈಜ್ಞಾನಿಕವಾದ ಸಂಬಂಧವಾದ ಹೇಳಿಕೆ''[೩] ಇದನ್ನು ಗಮನಿಸಿದಾಗ ಶುಭ-ಅಶುಭ, ಫಲ-ವಿಫಲ, ಭಯ-ಅಭಯಗಳ ಕುರಿತು ಪ್ರಕಟಪಡಿಸುವ ಕ್ರಿಯೆಯೇ ನಂಬಿಕೆ. ನಂಬಿಕೆಗಳು ಜನಪದರಲ್ಲಿ ನಿತ್ಯ ಜೀವನದ ಒಂದು ಮಹತ್ವದ ಅಂಗಗಳಾಗಿವೆ. ಇದಲ್ಲದೇ ಐತಿಹ್ಯದ ಹಿನ್ನೆಲೆಯುಳ್ಳ

ನಂಬಿಕೆಗಳು ನಮ್ಮ ಜನಪದರಲ್ಲಿ ಕಾಣಬಹುದು. ಜಗತ್ತಿನಲ್ಲಿ ಪ್ರಭುದ್ಧವಾದ ಧರ್ಮಗಳು ಹುಟ್ಟಿಕೊಂಡು ಬೆಳಕು ಪಡೆಯುವುದಕ್ಕಿಂತ ಮುಂಚೆ ಮೊದಲು ನೈಸರ್ಗಿಕ ಧರ್ಮಗಳು ನಂಬಿಕೆಗಳನ್ನು ಅತಿಮಾನುಷ, ಶಕ್ತಿಯ ಭಯದ ಹಿನ್ನೆಲೆಯಲ್ಲಿ ಸ್ವೀಕರಿಸಿದ್ದಾಗಿವೆ. ಈ ದಿಶೆಯಲ್ಲಿ ಅರಾಧಿಸುವ ದೇವರ ದೈವದ ಕುರಿತು ಹಲವಾರು ನಂಬಿಕೆಗಳು ಉಗಮಗೊಂಡು ಜಾತ್ರೆ-ಉತ್ಸವಗಳು ಮಾಡುವಂತೆ ಪ್ರೇರಣೆಯನ್ನುಂಟು ಮಾಡಿವೆ. ಇಂತಹ ನಂಬಿಕೆಗಳಲ್ಲಿ ದೇವರ ಬಗ್ಗೆ ಇರುವ ಭಯ ಮತ್ತು ಆ ದೇವರು ತೋರಿಸಿದ ಪವಾಡ ನಿಗೂಢ ಸತ್ಯತೆಗಳು ಕೆಲವೊಮ್ಮೆ ರೋಗ-ರುಜಿನಗಳಿಂದ ಜನರನ್ನು ರಕ್ಷಿಸಿದ್ದು ಕ್ಷಾಮ, ಬರಗಾಲಗಳಿಂದ ಉಳಿಸಿದ್ದು, ಸಂತಾನ ನೀಡಿದ್ದು. ಮುತ್ತೈದಿತನ ನೀಡಿದ್ದು. ಬಾಧೆಗಳಿಂಡ ಬೆಳೆ ಉಳಿಸಿದ್ದು ಬಾವಿಗಳಲ್ಲಿ ನೀರು ಬರುವಂತೆಮಾಡಿದ್ದು, ಇತ್ಯಾದಿಗಳಾಗಿವೆ. ಈ ನಂಬಿಕೆಗಳು ಒಂದಿಲ್ಲೊಂದು ಆಧಾರದ ಮೇಲೆ ತಾಲೂಕಿನಲ್ಲಿ ಜಾತ್ರೆ-ಉರುಸು ಉತ್ಸವಗಳು ಇಂದಿಗೂ ಜರುಗುವುದಕ್ಕೆ ಆ ದೇವರ ಪವಾಡ ಮತ್ತು ಭಕ್ತಿಯೇ ಇದಕ್ಕೆ ಕಾರಣವಾಗಿದೆ.

**೪.೧. ಡೊಳ್ಳು ವಾದ್ಯದ ವಿಶೇಷತೆ**

ಕರ್ನಾಟಕದ ಬಿಜಾಪೂರ ಜಿಲ್ಲೆಯ ಇಂಡಿ ತಾಲೂಕಿನಲ್ಲಿ ಡೊಳ್ಳು ಕುಣಿತ ಪ್ರಚಲಿತವಾಗಿದೆ. 'ಡೊಳ್ಳು' ಎನ್ನುವ ವಾದ್ಯ ವಿಶೇಷದೊಂದಿಗೆ ನಡೆಯುವ ಈ ಕುಣಿತ ಕುರುಬ ಜಾತಿಯೊಂದಿಗೆ ನೇರವಾದ ಸಂಬಂಧ ಹೊಂದಿದೆ. ಡೊಳ್ಳಿಗೆ ಸಂಬಂಧಿಸಿದಂತೆ ಕುರುಬರಲ್ಲಿ ಕೆಲವೊಂದು ಪುರಾಣಗಳಿವೆ.

ಪುರಾಣ : ಹಿಂದೆ ಡೊಳ್ಳಾಸುರ ಎಂಬ ರಾಕ್ಷಸನಿದ್ದ, ಆತ ಶಿವನನ್ನು ಒಲಿಸಿಕೊಳ್ಳಲು ಸೂಜಿಯ ಮೇಲೆ ನಿಂತು ತಪಸ್ಸನ್ನಾಚರಿಸಿದ, ಒಂದು ದಿನ ದೇವರು ಅವನಿಗೆ ಪ್ರತ್ಯಕ್ಷವಾಗಿ ವರ ಕೇಳುವಂತೆ ಹೇಳಿದ. ಆಗ ಡೊಳ್ಳಾಸುರನು 'ನಿನ್ನನ್ನು ನುಂಗಬೇಕೆಂದು' ವರ ಕೇಳಿದನು. ಶಿವ ತಥಾಸ್ತು ಎಂದಾಗ ಡೊಳ್ಳಾಸುರನು ಶಿವನನ್ನು ನುಂಗಿಬಿಟ್ಟನು. ಆಗ ಮೂರು ಲೋಕವು ಪ್ರಳಯವಾಯಿತು. ದೇವಾನುದೇವತೆಗಳು ಬೊಬ್ಬೆಯಿಟ್ಟರು. ಶಿವನು ಆ ರಾಕ್ಷಸನ ಹೊಟ್ಟೆಯಲ್ಲಿಯೇ ಬೆಳೆಯತೊಡಗಿದನು. ಭಾರ ತಡೆಯಲಾರದೆ ಆತ 'ನೀನು ಹೊರಗೆ ಬಾ' ಎಂದು ಹೇಳಲಾಗಿ ಶಿವ ಆತನ ಹೊಟ್ಟೆಯನ್ನು ಸೀಳಿ ಹೊರಬಂದನು. ಆ ಮೇಲೆ ಅವನ ಹೊಟ್ಟೆಯನ್ನು ಡೊಳ್ಳು ಮಾಡಿದ ಚರ್ಮ ಸುಲಿದು ಅದರ ಎರಡು ಬದಿಗಳಿಗೆ ಬಿಗಿದ. ಕರುಳಿನಿಂದ ಹಗ್ಗ ಬಿಗಿದ ಕೈಗಳನ್ನು ಗುಣಿ ಮಾಡಿದ ಮೇಲೆ ಅದನ್ನು ಹಾಲುಮತದ ಕುರುಬನಿಗೆ ದಾನ ಮಾಡಿದನು.

ಪುರಾಣ : ಇನ್ನೊಂದು ಪ್ರತೀತಿಯ ಪ್ರಕಾರ ಡೊಳ್ಳಾಸುರ ರಾಕ್ಷಸನು ಈತ ಲೋಕದಲ್ಲಿ ತಾನೊಬ್ಬನೇ ಶ್ರೇಷ್ಠನಾಗಬೇಕೆಂಬ ಇಚ್ಛೆಯಿಂದ ಈಶ್ವರನನ್ನು ಕುರಿತು ತಪಸ್ಸು ಮಾಡಿದ. ಈಶ್ವರನು ಪ್ರತ್ಯಕ್ಷವಾಗಿ ವರಬೇಡುವಂತೆ ಕೇಳಲು 'ನಿನ್ನನ್ನು ನುಂಗುವಂತೆ' ವರಕೊಡು ಎಂದನು. ಆಗ ಶಿವನು ಅದಕೊಪ್ಪಿ 'ನನ್ನನ್ನು ಮತ್ತೆ ನೀನು ಎಂದು ಬಿಡುವುದು' ಎಂದು ಕೇಳಿದನು. ಆಗ ರಾಕ್ಷಸನು ನಿನ್ನನ್ನು ಪಂಚರಾತ್ರಿಗಳು ಒಂದು ಗೂಡಿದ ದಿನದಂದು ಬಿಡುತ್ತೇನೆಂದನು. ಈ ಮಾತಿನಂತೆ ಡೊಳ್ಳಾಸುರನು ಈಶ್ವರನನ್ನು ನುಂಗಿದನು. ಇತ್ತ ಡೊಳ್ಳಾಸುರನ ಹೊಟ್ಟೆಯಲ್ಲಿದ್ದ ಶಿವನು ಒಂದು ದಿನ ಪಂಚರಾತ್ರಿಗಳು ಒಂದು ಗೂಡುವಂತೆ ಮಾಡಿದನು. ಆದರೆ ಹೊಳ್ಳಾಸುರನು ಶಿವನನ್ನು ಬಿಡಲೇಇಲ್ಲ. ಇತ್ತ ಪಾರ್ವತಿಯು ಹೆದರಿ ಗಣಪತಿಯನ್ನು ಕರೆದು ಶಿವನನ್ನು ಹುಡುಕಲು ಕಳುಹಿಸುವಳು. ಆದರೆ ಗಣಪತಿಯು ಶಿವನ ಭಯಂತಕ ರೂಪ ನೋಡಿ ಹೆದರಿ ಶಿವನನ್ನು

ಧ್ಯಾನಿಸುವನು. ಆಗ ಶಿವನು ಡೊಳ್ಳಾಸುರನ ಹೊಟ್ಟೆಯಲ್ಲಿಯೇ ಬೆಳೆಯುವನು. ಹೀಗೆ ಬೆಳೆಯುತ್ತಿರುವಾಗ ಡೊಳ್ಳಾಸುರನ ಹೊಟ್ಟೆಯು ಸೀಳಿ ಹೋಗುತ್ತದೆ. ಶಿವನು ಈ ಅಸುರನ ಡೊಕ್ಕೆಯಿಂದ 'ಪಗಡ' (ಡೊಳ್ಳಿನ ಕಾಯಿ) ಮಾಡಿದನು. ಚರ್ಮ ತೆಗೆದು ಪಡಗಕ್ಕೆ ಮುಟ್ಟಿದ. ಕರಳು ತೆಗೆದು ಹಗ್ಗ ಮಾಡಿದ. ರಾಕ್ಷಸನ ಕೋರೆಯನ್ನು ಮುರಿದು ಡೊಳ್ಳಿನ ಗುಣಿಯನ್ನು ಮಾಡಿದ ಆತನ ಅಂಗೈಯನ್ನು ಕಡಿದು ತಾಳವನ್ನು ಮಾಡಿದ. ಆ ಮೇಲೆ ಇದರಿಂದ ಬರುವ ಅದ್ಭುತ ನಾದದಿಂದ ತಾನೇ ಬೆರಗಾದನು. ಆಮೇಲೆ ಭೂಮಿಯಲ್ಲಿ ಕುರುಬರ ಕುಲವನ್ನು ಶಿವನು ಅರ್ಪಿಸಿ ಅವರಿಗೆ ಡೊಳ್ಳನಿತ್ತನು. ಡೊಳ್ಳನ್ನು ಅವರ ಕೈಗೆ ಒಪ್ಪಿಸುವಾಗ ಶಿವ ಹೀಗೆಂದು ಎಚ್ಚರಿಸಿದ ''ಕೆಟ್ಟ ಕಾರ್ಯಕ್ಕೆ ಡೊಳ್ಳನ್ನು ಬಡಿದರೆ ನಾಶವಾಗಿ ಹೋಗುತ್ತೀರಿ ಒಳ್ಳೆಯ ಕಾರ್ಯಕ್ಕೆ ಮಾತ್ರ ಡೊಳ್ಳು ಬಾರಿಸಿರಿ'' ಎಂದನು.

ಪುರಾಣ: ಈ ಡೊಳ್ಳಿನ ಬಗ್ಗೆ ಮತ್ತೊಂದು ಪೌರಾಣಿಕ ಕಥೆಯೆಂದರೆ ಒಂದು ದಿನ ಪಾರ್ವತಿ ಮತ್ತು ಶಿವನು ಜೂಜಾಡುತ್ತಿದ್ದರು. ಸೋತವರು ತಮ್ಮ ಸರ್ವಸ್ವವನ್ನೂ ಬಿಟ್ಟು ಕೈಲಾಸ ತೊರೆದು ಯಾರಿಗೂ ಕಾಣದಂತೆ ಜೀವಿಸಬೇಕೆಂದು ಪಣತೊಟ್ಟರು. ಅದೇ ರೀತಿಯಾಗಿ ಶಿವನು ಸೋತ. ಪಂದ್ಯದ ಪಣದಂತೆ ಭೂಲೋಕಕ್ಕೆ ಬಂದ ಶಿವನು ಒಂದು ಕಲ್ಲುಗವಿಯಲ್ಲಿ ಕಲ್ಲಾಗಿ ಬಿದ್ದಿದ್ದ. ಇತ್ತ ಶಿವನು ಕಲ್ಲಾಗಿ ಬಿದ್ದ ಜಾಗದಲ್ಲಿ ಮಾಯಾಮೂರ್ತಿಯ ಮಾಯಾರೂಪದಿಂದ ಕಾಯುತ್ತಿದ್ದ. ಹೀಗೆ ಬಹಳ ಸಮಯ ಕಳೆದವು. ಶಿವನಿಲ್ಲದೇ ಜಗತ್ತಿಗೆ ಜಗತ್ತೇ ಗೋಳಾಡಿತು. ಪಾರ್ವತಿಗೆ ಲೋಕ ಪಾಲನೆಯನ್ನು ಮಾಡುವುದು ಸಾಕಾಗಿಹೋಯಿತು. ಅನಂತರ ನಾರದನು ಶಿವನನ್ನು ಪತ್ತೆಮಾಡಿ ಮಾಯಾಮೂರ್ತಿಯನ್ನು ಕೊಂದನು. ಆಗ ತನಗೆ ಕಾವಲಿದ್ದ ಮಾಯಾ ಮೂರ್ತಿಯನ್ನು ಒಟ್ಟು ಬರಲಾರದ ಶಿವನು ಅವನ ಕಳೇಬರೆಯಿಂದ ಡೊಳ್ಳನ್ನು ಮಾಡಿದ ನಾರದ ಈ ಡೊಳ್ಳನ್ನು ಬಾರಿಸುತ್ತ ''ದೇವಿಯೇ ನಿಮ್ಮಯ ದೇವರು ಬಂದಾರ ಬನ್ನಿರೆ ಎಂದು ಪಾರ್ವತಿಯನ್ನು ಕರೆದನು. ಆಗ ಪಾರ್ವತಿಯು ಸ್ವಾಮಿ ನಮ್ಮಯ ದೇವರು ಬಂದಾನ ಬನ್ನಿರೆ ಎಂದು ಸಖಿಯರೊಂದಿಗೆ ಸಂಭ್ರಮದಿಂದ ಗಂಡನನ್ನು ಸ್ವಾಗತಿಸಿದಳು. ಹೀಗೆ ಡೊಳ್ಳಿನ ಪದಗಳು ಈಗಲೂ ಕೂಡಾ ಈ ರೀತಿಯಾಗಿ ಆರಂಭವಾಗುತ್ತದೆಯೆಂದು ಜನರು ನಂಬುತ್ತಾರೆ.

ಹೀಗೆ ಪ್ರಪಂಚದ ಜನಾಂಗೀಯ.ಚರಿತ್ರೆಯಲ್ಲೂ ಕುರುಬ ಜನಾಂಗಕ್ಕೆ ಪ್ರಾಚೀನವಾದ ಇತಿಹಾಸವಿದ್ದಂತೆ ವಾದ್ಯ ಪರಿಕರಗಳಲ್ಲಿ ಡೊಳ್ಳಿಗೂ ಪ್ರಾಚೀನ ಇತಿಹಾಸವಿದೆ. ಇದು ಪ್ರಪಂಚದ ಪ್ರಥಮ ವಾದ್ಯವೂ ಹೌದು. ಡೊಳ್ಳಿನ ಉಗಮವು ಸಂಗೀತದ ಉದ್ದೇಶದಿಂದ ಆಗಿದ್ದಲ್ಲ. ಅದರ ಪ್ರಾರಂಭಿಕ ಹಿನ್ನೆಲೆಯು: ಕುರಿ ಕಾಯುವಾಗ ಕಾಡು ಪ್ರಾಣಿಗಳಿಂದ ರಕ್ಷಣೆಪಡೆಯಲು ಪರಿಸರದ ಸಂಪರ್ಕ ಪಡೆಯಲು ದುರಂತದ ಮುನ್ಸೂಚನೆ ಕಂಡುಬಂದಾಗ ಜಾಗೃತರಾಗುವಂತೆ ಇರುವಂತೆ ಉಪಯೋಗಿಸುತ್ತಿದ್ದರು. ಪ್ರಾಚೀನ ಕಾಲದಲ್ಲಿ ಡೊಳ್ಳುಗಳು ಚಿಕ್ಕದಾಗಿದ್ದವು. ಕುರಿಕಾಯುವಾಗ ಕುರಿಗಾರರು ಸದಾ ತಮ್ಮ ಹೆಗಲಿಗೆ ಹಾಕಿಕೊಂಡೇ ಇರುತ್ತಿದ್ದರು. ಆಗ ಅದು ಶಾಸ್ತ್ರೀಯವಾದ ಸ್ಥಾನಮಾನ ಪಡೆದಿರಲಿಲ್ಲ. ಕಾಲ ಕ್ರಮೇಣವಾಗಿ ಲಯಬದ್ಧವಾಗಿ ಬಾರಿಸುವಿಕೆಯಿಂದ ಶಾಸ್ತ್ರೀಯ ಚೌಕಟ್ಟಿನಡಿಯಲ್ಲಿ ಇದನ್ನು ತರಲಾಯಿತು. ಕಾಲಾಂತರದಲ್ಲಿ ಇದು ಮನರಂಜನೆಗಾಗಿ, ದೈವರಾಧನೆಗಾಗಿ ಬಳಕೆಗೆ

ಬಂದಿರಬೇಕು. ಡೊಳ್ಳಿನ ಕೃಶವಾಸ್ಥೆಯಲ್ಲಿದ್ದ ಆಕಾರದಲ್ಲಿ ಬದಲಾವಣೆಯಾಗಿ ಪೂಜಾ ಸಮಯದಲ್ಲಿ ಜನರನ್ನು ಕಲೆ ಮೆಚ್ಚಿಸಲು ಭಕ್ತಿಯ ಸಂತೃಪ್ತಿಗೆ ಅರ್ಹವಾದ ನಂತರ ದೈವ ಪರಿವಾರಗಳಲ್ಲಿ ಒಂದಾಗಿ ಡೊಳ್ಳಿಗೂ ಪೂಜೆಯನ್ನು ಸಲ್ಲಿಸುವ ರೂಢಿ ಕುರುಬರಲ್ಲಿ ಬೆಳೆದುಬಂತು. ಇದು ಅಷ್ಟೊಡ್ಡಲಗದಲ್ಲಿ ಶ್ರೇಷ್ಠವಾಯಿತು. ಆದ್ದರಿಂದ ಗುಂಡಾರಗಳಲ್ಲಿ ಹಬ್ಬ ಹರಿದಿನಗಳಲ್ಲಿ ಜಾತ್ರೆ ಉತ್ಸವಗಳಲ್ಲಿ ಜಾನಪದ ಕಲಾ ಮೇಳಗಳಲ್ಲಿ ಮಾತ್ರ ನುಡಿಸಬೇಕು ಎಂದು ಸಂಪ್ರದಾಯ ಹೇಳುತ್ತಿದೆ. ಪುರಾಣದ ಕಥಾನಕಗಳನ್ನು ಡೊಳ್ಳಿನ ಹಾಡುಗಳ ಮುಖೇನ ಜನರಿಗೆ ತಿಳಿಸುವ ಭಕ್ತಿಪ್ರಧಾನ ಹಾಡುಗಳ ರಚನೆಯ ನಂತರ ಈ ವಾದ್ಯಕ್ಕೆ ಎಲ್ಲಿಲ್ಲದ ಮಹತ್ವ ಬಂದಿದೆ. ಇದು ಇಂದು ಪ್ರದರ್ಶನ ಕಲೆಯಾಗಿಯೂ ಹೊರಹೊಮ್ಮಿದೆ. ಡೊಳ್ಳು ನಮ್ಮ ದೇಶದಲ್ಲಿ ಮಾತ್ರ ಮಹತ್ವಪಡೆದಿದೆಯೇನೋ ಅಲ್ಲಿ ಪ್ರಪಂಚದ ನಾನಾ ಭಾಗದ ಪಶುಪಾಲಕ ಜನ ಜಾತಿಗಳು ಡೊಳ್ಳು ಬಾರಿಸುತ್ತಾ ತಮ್ಮದೇಅದ ದಾಟಿಯಲ್ಲಿ ಹಾಡಿ ಲಯಬದ್ಧವಾಗಿ ಕುಣಿದು ಮೈಮರೆಯುತ್ತಿರುವುದನ್ನು ಕಾಣಬಹುದು. ದೈಹಿಕ, ಮಾನಸಿಕ, ದಣಿವನ್ನು ನಿವಾರಿಸಿಕೊಳ್ಳಲು ಪಶುಪಾಲಕರು ಇದರ ಅಧೀನರಾಗಿದ್ದಾರೆ. ಬೇರೆ ಬೇರೆ ಪ್ರದೇಶಗಳಲ್ಲಿರುವ ಡೊಳ್ಳಿನ ಆಕಾರಗಳಲ್ಲಿ ವ್ಯತ್ಯಾಸಕಂಡರೂ ಡೊಳ್ಳು ತಯಾರಿಕೆಯಲ್ಲಿ ಕುರಿ, ಆಡು, ಹೋತ ಮತ್ತು ಟಗರಿನ ಚರ್ಮವನ್ನು ಮಾತ್ರ ಬಳಸಲಾಗುತ್ತದೆ. ಇದರಿಂದ ಪ್ರಪಂಚದ ಪಶುಪಾಲಕರು ಡೊಳ್ಳು ತಯಾರಿಕೆಯಲ್ಲಿ ಸಮಾನವಾದ ವಿಧಿ-ವಿಧಾನಗಳನ್ನು ಬಳಸಿಕೊಂಡುಬಂದಿದ್ದಾರೆ.

''ಮಾನವ ಕುರಿ ಸಾಕಾಣಿಕೆಯೊಂದಿಗೆ ದನ ಸಾಕಾಣಿಕೆಗೆ ಇಳಿದಾಗ ಕುರುಬರು ಅಮೂರ್ತ ದೈವಗಳ ಸ್ಥಾನದಲ್ಲಿ ಪಶುಪತಿಯಾದ ರುದ್ರ, ಮಾರ್ತಾಂಡರ ಪೂಜೆ ಪ್ರಾರಂಭವಾಗಿ ಡೊಳ್ಳು 'ಡಮರು' ಆಗಿ ಪರಿವರ್ತನೆಗೊಂಡು ಪಶುಪಾಲಕರ ಕಲ್ಪನೆಯ ದೈವ ಶಿವನ ಕೈಯಲ್ಲಿ ಅಲಂಕರಿಸಲ್ಪಟ್ಟಿತು. ಅನಂತರ ಮಾಳಿಂಗರಾಯ, ಬೀರಪ್ಪ, ರೇವಣಸಿದ್ಧ ಈ ಇಂಡಿ ತಾಲೂಕಿನ ಅನೇಕ ದೇವತೆಗಳ ಪ್ರೀತಿಯ ವಾದ್ಯವಾಯಿತು. ಹಳೆ ತಲೆಮಾರಿನ ಸಾಹಿತಿಗಳು ಡೊಳ್ಳನ್ನು 'ಡುಡುಂಚಿ' ಎಂದಿದ್ದಾರೆ. ಭಾರತೀಯ ಸಂಸ್ಕೃತಿಯು ಡೊಳ್ಳು ವಾದ್ಯದ ಸಂಪೂರ್ಣ ಲಾಭ ಪಡೆಯುವಲ್ಲಿ ಯಶಸ್ವಿಯಾಗಿದೆ. ಸಾಮೂಹಿಕವಾಗಿ ಡೊಳ್ಳನ್ನು ಬಾರಿಸಿದಾಗ ಅದರ ಶಬ್ದ ಮುಗಿಲಗಲ ಜಗದಗಲಗಳಲ್ಲಿ ಕಂಪಿಸುತ್ತದೆ. ಡೊಳ್ಳಿನ ನಾದವು ಶರೀರದಲ್ಲಿ ರೋಮಾಂಚನವನ್ನುಂಟು ಮಾಡುತ್ತದೆ. ಹೊಸ ಚೈತನ್ಯ ಉಕ್ಕಿಹರಿಯುತ್ತದೆ. ಅದರ ಶಬ್ದಮಾತ್ರದಿಂದ ಸಕಲ ಪ್ರಾಣಿಗಳೆಲ್ಲ ಜಾಗ್ರತಾವಸ್ಥೆಗೆ ಬರುತ್ತವೆ. ಕ್ಷಣಾರ್ಧದಲ್ಲಿ ದಣಿವು ಮಾಯವಾಗುತ್ತವೆ. ಡೊಳ್ಳು ವಾದನ, ಡೊಳ್ಳಿನ ಕುಣಿತ ಮತ್ತು ಡೊಳ್ಳಿನ ಪದಗಳನ್ನು ಕೇಳಿದಾಗ ಶರೀರ ಮೈದೂಗಿ ಆನಂದವನ್ನು ಸವಿಯುತ್ತದೆ. ನಿಯಮಿತ ಸಮಯದಲ್ಲಿ ಡೊಳ್ಳು ವಾದನ ಮತ್ತು ಹಾಡುಗಳನ್ನು ಕೇಳುವುದರಿಂದ ಕೆಲವು ರೋಗಗಳು ಗುಣವಾಗುತ್ತವೆ. ದುಷ್ಟ ಶಕ್ತಿಗಳು ದೂರವಾಗುತ್ತವೆ. ಡೊಳ್ಳು ಕುಣಿತದಿಂದ ಶರೀರಕ್ಕೆಲ್ಲಾ ವ್ಯಾಯಮ ದೊರೆಯುತ್ತದೆ.

**ಡೊಳ್ಳು**

ಕನ್ನಡ ನಾಡಿನ ಬಹುಮುಖ್ಯ ಚರ್ಮವಾದ್ಯವಾದ ಈ ಡೊಳ್ಳು ಅಷ್ಟೇ ಬೃಹತ್ ವಾದ್ಯ ಕೂಡ. ಡೊಳ್ಳನ್ನು ಹೆಬ್ಬೇವು ಹೊನ್ನೆಮರಗಳಿಂದ ತಯಾರಿಸುತ್ತಾ ಸುಮಾರು ೨ ½ ಅಡಿ ಉದ್ದದ ಮರದ ತುಂಡನ್ನು ಕತ್ತರಿಸಿ

ಅದರ ಒಳಭಾಗವನ್ನು ಪೂರ್ತಿಯಾಗಿ ಟೊಳ್ಳು ಮಾಡಲಾಗುತ್ತದೆ. ಬಲಭಾಗಕ್ಕೆ ಹೋತದ ಚರ್ಮ ಮತ್ತು ಎಡಭಾಗಕ್ಕೆ ಆಡಿನ ಚರ್ಮವನ್ನು ಹೊದಿಸಲಾಗುತ್ತದೆ. ಸೆಣಬಿನ ಹಗ್ಗದಿಂದ ಹೊರ ಮೈಯನ್ನು ಬಿಗಿಯಲಾಗುತ್ತದೆ.

**ಕುಣಿತ**

ಡೊಳ್ಳಿನ ಮೇಳವನ್ನು 'ಒಡ್ಡಿವಾಲಗ' ಎನ್ನುತ್ತಾರೆ. ಈ ಮೇಳದಲ್ಲಿ ಕನಿಷ್ಠ ಪಕ್ಷ ೧೦-೨೦ ಜನರಿರಬಹುದು. ಡೊಳ್ಳು ಬಾರಿಸುವವರು ಸಾಮಾನ್ಯ ಪೋಷಾಕಿನಲ್ಲಿಯೇ ಇರುತ್ತಾರಾದರೂ ವಿಶೇಷ ಸಂದರ್ಭದಲ್ಲಿ ಕಲಾವಿದರು ವಿವಿಧ ರೀತಿಯ ಬಣ್ಣದ ಪೋಷಾಕು ಧರಿಸಿರುತ್ತಾರೆ. ಉತ್ತರ ಕರ್ನಾಟಕದ ಅದರಲ್ಲೂ ಇಂಡಿ ತಾಲೂಕಿನ ಕುರುಬರು ಮೈಗೆ ಕಂಬಳಿ ಸುತ್ತಿ ಡೊಳ್ಳು ಬಾರಿಸುತ್ತಾರೆ. ಮಧ್ಯದಲ್ಲಿ ವೀರಗಾರನೊಬ್ಬನಿದ್ದು ಈತ ಡೊಳ್ಳನ್ನು ಬಾರಿಸುವುದಿಲ್ಲ, ಬದಲಿಗೆ (ಚಳ್ಳಾಮ) ತಾಳ ನುಡಿಸುತ್ತಾ ಹಾಡು ಹೇಳುತ್ತಿರುತ್ತಾನೆ. ಸುತ್ತಲಿನ ಕುಣಿತದ ಭಂಗಿಗಳು ಇವನ ಮೂಲಕವೇ ಬದಲಾವಣೆಯಾಗುತ್ತದೆ. ಡೊಳ್ಳಿನ ಬಡಿತ 'ಗುಣಿ' ಲೆಕ್ಕದಲ್ಲಿತರುತ್ತದೆ. ಒಂದು ಗುಣಿಗೆ ಮೊದಲ ಹೆಜ್ಜೆ ಎನ್ನುತ್ತಾರೆ. ಒಂದು ಕೋಲು (ಬಲ) ಪಟ್ಟಿ ಇನ್ನೊಂದು ಕೈ (ಎಡ) ಪಟ್ಟಿ ಸೇರಿದರೆ ಒಂದು ಗುಣಿ ಇದು ಕ್ರಮೇಣ ಹೆಚ್ಚುತ್ತಾ ಹೋಗುತ್ತದೆ. ಗುಣಿ ಸಾಮಾನ್ಯವಾಗಿ ಬೆಸ ಸಂಖ್ಯೆಯಲ್ಲಿಯೇ ಇರುತ್ತದೆ. ಅವರು 'ಏಳುಗುಣಿ'ಯನ್ನು ಬಾರಿಸುವುದಿಲ್ಲ. ಅದು ಅಶುಭ ಡೊಳ್ಳು ಕುಣಿತದಲ್ಲಿ ಕೆಲವೊಂದು ವಿಶೇಷ ಮಜಲುಗಳಿರುತ್ತವೆ.

**ಕುಳಿತು ಬಾರಿಸುವುದು**

ಇದನ್ನು ಬಿಜಾಪೂರ ಜಿಲ್ಲೆಯ ಕಡೆಯಲ್ಲೆಲ್ಲಾ ಕೂತು ಪಾಲಿ ಎನ್ನುತ್ತಾರೆ. ಕುಕ್ಕರೆ ಕಾಲಿನಲ್ಲಿ ಕುಳಿತು ಡೊಳ್ಳನ್ನು ಬಾರಿಸುತ್ತಾ ಕುಪ್ಪಳಿಸುವ ಕ್ರಮವಾಗಿದೆ.

**ಲಾಗ ಹಾಕುವುದು**

ಡೊಳ್ಳನ್ನು ಬಾರಿಸುತ್ತಲೇ ಲಾಗ ಹಾಕಿ ಮತ್ತೆ ಅದೇ ಸ್ಥಿತಿಯಲ್ಲೇ ನಿಲ್ಲುವುದು

**ಹಾರುವುದು**

ಡೊಳ್ಳನ್ನು ಜಿಗಿ-ಜಿಗಿದು ಬಾರಿಸುತ್ತಲೇ ಇರುವುದು ಮಂಡಿ ಬಡಿತ: ಡೊಳ್ಳನ್ನು ಬಾರಿಸುವ ಜೋಡಿ ವ್ಯಕ್ತಿಗಳು ಎಡಗಾಲು ಮಂಡಿಯನ್ನು ನೆಲಕ್ಕೆ ಒತ್ತಿ ಬಲಗಾಲನ್ನು ನೆಲಕ್ಕೆ ಗಟ್ಟಿಯಾಗಿ ಊರಿ ಡೊಳ್ಳನ್ನು ಬಾರಿಸುವುದು

ಲವಣಹಾಕುವೊಂದು ವಿಶೇಷ ಕುಣಿತವು ಈ ಇಂಡಿ ತಾಲೂಕಿನಲ್ಲಿ ಕಂಡು ಬರುತ್ತದೆ. ಇದರ ವಿಶೇಷವೆಂದರೆ ಅಗಲವಾದ ಹಲಗೆಯ ಮೇಲ್ಭಾಗದಲ್ಲಿ ಒಂದು ಕಬ್ಬಿಣದ ಕೊಂಡಿಯನ್ನಿರಿಸಿ ಅದರ ಸುತ್ತಲೂ ೮-೧೦ ರಂಧ್ರಗಳನ್ನು ಮಾಡಿ ಅದಕ್ಕೆ ನೂಲಿನ ಹಗ್ಗಗಳನ್ನು ಸೇರಿಸಿಡುತ್ತಾರೆ. ಮಧ್ಯದಲ್ಲಿ ದಪ್ಪವಾದ ಒಂದು 'ಮಿಣಿ'ಯನ್ನು ಇಳಿಯ ಬಿಡುತ್ತಾರೆ. ಎಂಟು ಅಥವಾ ಹತ್ತು ಅಡಿ ಎತ್ತರದಲ್ಲಿ ಕಟ್ಟಿರುವ ಬಿದಿರು ಬೊಂಬಿಗೆ ಈ ಕೊಂಡಿಯನ್ನು ಹುರಿಹಾಕಿ ಭದ್ರಪಡಿಸುತ್ತಾರೆ. ಡೊಳ್ಳನ್ನು ಬಾರಿಸುವವರು ಪ್ರತಿಯೊಬ್ಬರೂ ಎಡಗೈಯಲ್ಲಿ ಹಗ್ಗವನ್ನು ಹಿಡಿದು

ಬಲಗೈಯಲ್ಲಿ ಡೊಳ್ಳು ಬಾರಿಸುತ್ತಾ ಕುಣಿಯುತ್ತಾರೆ. ಆವಾಗ ಹಗ್ಗಗಳು ಜಡೆಯಂತೆ ಸುತ್ತುತ್ತವೆ. ಈ ಜಡೆ ಹೆಣೆಯುವ ಡೊಳ್ಳಿನ ಕುಣಿತವು ಇದೇ ತಾಲೂಕಿನಲ್ಲಿ ರೋಡಗಿ, ಲಾಳಸಂಗಿ, ಸಂಗೋಗಿ ಗ್ರಾಮಗಳಲ್ಲಿ ಪ್ರತ್ಯಕ್ಷವಾಗಿ ನೋಡಿದ ದೃಶ್ಯವಾಗಿದೆ.

ಬೀರಪ್ಪ, ಮಾಳಪ್ಪರ ಆರಾಧನೆ ಮತ್ತು ಜಾತ್ರೆಯ ಸಂದರ್ಭದಲ್ಲಿ ಕುರುಬರು ಡೊಳ್ಳನ್ನು ಬಾರಿಸುತ್ತಾ ಹಾಡುವುದು ಸಾಂಪ್ರದಾಯಿಕವಾಗಿದೆ. ಆದರೆ ಡೊಳ್ಳು ಇಂದು ನಿರ್ಧಿಷ್ಟ ಜನಾಂಗಕ್ಕೆ ಸಂಬಂಧಿಸಿದ ಕುಣಿತವಾಗಿ ಉಳಿದಿಲ್ಲ. ಹಬ್ಬ, ಜಾತ್ರೆ, ರಥೋತ್ಸವ, ಗ್ರಾಮದೇವರ ಜಾತ್ರೆ ಎಲ್ಲಾ ಸಮಾರಂಭಗಳಲ್ಲೂ ಡೊಳ್ಳು ಇಲ್ಲದೇ ನಡೆಯುವಂತಿಲ್ಲ.

ಒಟ್ಟಾರೆ ಇವೆಲ್ಲಾ ಕಾರಣಗಳಿಂದ ಡೊಳ್ಳು ಆಧ್ಯಾತ್ಮಿಕವಾಗಿ, ದೈಹಿಕ, ಮಾನಸಿಕ, ಸಾಮಾಜಿಕ, ವೈಜ್ಞಾನಿಕವಾಗಿ ಮಹತ್ವವನ್ನು ಪಡೆದಿದೆ.

### ಡೊಳ್ಳಿನ ಹಾಡು ಡೊಳ್ಳಿನ ಕೈಪಟ್ಟು

ಡೊಳ್ಳನ್ನು ಕುಣಿಯುತ್ತಾ ಬಾರಿಸುವ ಬದಲು ಡೊಳ್ಳಿನ ಮೇಲೆ ಕೈಪೆಟ್ಟು ಹಾಕುತ್ತಾ ಅದನ್ನು ತಾಳವನ್ನಾಗಿ ಪರಿವರ್ತಿಸಿಕೊಂಡು ಮುಖ್ಯ ಕಲಾವಿದನು ಹಾಡು ಹೇಳುತ್ತಾನೆ. ಉಳಿದ ಕೆಲವೊಂದಿಷ್ಟು ಜನರು ಹಿಮ್ಮೇಳದವರಾಗಿರುತ್ತಾರೆ.

ಶಿವನೇ ನಮ್ಮಯ ದೇವರು ಬಂದಾನ ಬನ್ನಿರೇ
ಸ್ವಾಮಿ ನಮ್ಮಯ ದೇವರು ಬಂದಾನು ಬನ್ನಿರೇ

ಎಂಬ ಪಲ್ಲವಿಯೊಡನೆ ಆರಂಭವಾಗುವ ಕಥೆಯು ರಾತ್ರಿಯ ವೇಳೆಯಲ್ಲಿ ಸಮಯ ಕಳೆದುದೇ ಗೊತ್ತಾಗುವುದಿಲ್ಲ. ನೂರಾರು ರೀತಿಯ ಬಿಡಿ ಬಿಡಿಯಾದ ಹಾಡುಗಳಲ್ಲದೆ, ಹಾಲುಮತ ಪುರಾಣ, ಪುಂಡಲಿಂಗೇಶ್ವರರ ಕಥೆ, ಯಲ್ಲಪ್ಪ ಮಹಾರಾಜರ ಪದ, ಬೀರಲಿಂಗೇಶ್ವರರ ಮಹಿಮೆ, ರೇವಣಸಿದ್ಧೇಶ್ವರ, ಮಾಳಪ್ಪ ಮುಂತಾದ ಪೌರಾಣಿಕ ಕಥೆಗಳನ್ನು ಹಣೆದು ಹಾಡುತ್ತಾರೆ. ಗದ್ಯ ಪದ್ಯದಲ್ಲಿರುವ ಚಂಪು ಶೈಲಿಯಲ್ಲಿರುವ ಕಥೆಗಳು ಕೂಡಾ ಡೊಳ್ಳಿನ ಹಾಡುಗಳಲ್ಲಿ ಕಂಡುಬರುತ್ತದೆ. ಅಂಥಹ ಒಂದು ಹಾಡು ಹೀಗಿದೆ!

ಹೋತೆನ್ನ ಹುಲಿಯೋ ಪಾತಳಕೆ ಇಳಿಯೋ
ಬಗ್ಗಿನಿ ಕಡಿಯೋ ಬಿಡ ನನ್ನ ಕುರಿಯ
ಕುರುಬರಪ್ಪನವು ಕುರುಬಾರೊ
ಏನನ ಅರಿಯದ ಕುರುಬಾರೊ

ಬಳಿವಸ್ತ್ರದಲ್ಲಿ ಫಳಾರ ಹಾಕಿಕೊಂಡು
ಟರ್ ಅಂತ ಕುರಿಗಳ ಕಾಯುವರು
ವಟ ವಟ ಕೋಲು ಹಿಡಿಯುರಪ್ಪ
ಒಡಕಲು ಸಂಗಟಿ ಉಣ್ಣುವರು

ಹೋತೆನ್ನ ಹುಲಿಯೋ ಪಾತಾಳವ ಹಿಡಿಯೋ
ಮಾತಾಡೋ ನನ್ನ ಕಿರಿ ಡೊಳ್ಳು
ಕುರಿಯ ಮೇಲೆ ಒಂದು ಕಣ್ಣಿರಲೆದ್ದ
ಡೊಳ್ಳಿನ ಮೇಲೆ ಒಂದು ಕೈಯಿರಲಿ
ಇಲ್ಲಿಗೆ ಒಂದು ಸಂದೇಳು ಗುರುವೆ
ಹಾಡಿದಾರ ಪದ ಮುಂದ್ಕೇಳು....

**ಡೊಳ್ಳು ವೇಷ**

ಒಂದು ಸಮುದಾಯದ ಸಮೂಹ ಪ್ರಜ್ಞೆಯಂತೆ ತಾತ್ವಿಕ ಬದ್ಧತೆಗಳು ಇಂತಹ ಒಂದು ಮೇಳ ರಚನೆಗೆ ಮುಖ್ಯಕಾರಣಗಳು. ಸುಖ-ದುಃಖ ಕುಂದು ಕೊರತೆ ತತ್ವದ ತಿಳುವಳಿಕೆಯ ಆಸಕ್ತಿ ಪರಸ್ಪರ ಸಹಾಯ ಸಹಕಾರಗಳ ಒಂದು ನಿರ್ಧಿಷ್ಟ ಪರಿಕಲ್ಪನೆ ಇಂತಹ ಮೇಳಗಳ ಹಿಂದೆ ಇರುತ್ತದೆ. ಆದರೆ ದುರ್ದೈವವಶಾತ್ ಇಂತಹ ಮೇಳಗಳ ಸ್ಥಿತಿ ಇಂದು ಕೇವಲ ಆರ್ಥಿಕ ಸುಭದ್ರತೆಯೊಂದೇ ತಮ್ಮ ಪರಮಗುರಿ ಎನ್ನುವ ನಿಲುವಿಗೆ ಸೀಮಿತವಾಗಿದೆ. ಡೊಳ್ಳು ಮೇಳ ಬರೀ 'ಹವ್ಯಾಸಿ' ಅಥವಾ 'ವೃತ್ತಿ' ಮಾರ್ಗದಲ್ಲಿ ಬದಲಾಗಿ ಅದೊಂದು ರಕ್ತಗತ ಮತ್ತು ನಿರಂತರ ಪ್ರಕ್ರಿಯೆಯಾಗಿದೆ. ತಮಗೆ ಬೇಕಾದಾಗ, ಬಿಡುವೆನಿಸಿದಾಗ ಹಾಡುವ, ಸೇವೆ ಮಾಡುವ ಪ್ರವೃತ್ತಿ ಇಲ್ಲಿನದು. ಹಾಡಿನಿಂದಲೇ ಸಕಲ ಸಂಪತ್ತುಗಳಿಸುವ ನೆಲೆ ಇಲ್ಲಿನದಲ್ಲ. ನಿರಂತರ ಬದುಕಿಗೆ ಇದೊಂದು ಬದಲಾವಣೆಯ ಪರಿ ಮಾತ್ರ. ಆರಾಧನೆಯ ಕ್ರಮ ಮಾತ್ರ.

ಈ ಹಿಂದೆ ಗಮನಿಸಿದಂತೆ ಕುರಿಕಾಯುವ ಸಂದರ್ಭದಲ್ಲಿ ಕಾಡು ಪ್ರಾಣಿಗಳಿಂದ ಕುರಿಗಳನ್ನು ತಮ್ಮನ್ನು ರಕ್ಷಿಸಲು ಡೊಳ್ಳು ಬಳಕೆಯಾಗುತ್ತಿತ್ತು. ಬುದ್ಧಿ ಬಲಿತಂತೆ ಅದು ಏಕತಾನತೆಯನ್ನು ಮುರಿಯುವ ಮಾಧ್ಯಮವಾಗಿ ಬಾಯಿಗೂ ಕೆಲಸ ನೀಡಿತು. ಕೈ ಬಾಯಿಗಳು ಕೆಲಸ ಪ್ರಾರಂಭಮಾಡಲು ಹಾಡುಗಾರನಿಗೆ ಶ್ರಮ ನಿವಾರಿಸಲು ಅಥವಾ ಹುರುಪುಕೊಡಲು ಹಿಮ್ಮೇಳ ಹುಟ್ಟಿಕೊಂಡಿರಬೇಕು. ಹೀಗೆ ಬರಬರುತ್ತಾ ಅದಕ್ಕೊಂದು ನಿರ್ಧಿಷ್ಟ ಚೌಕಟ್ಟು ಪ್ರಾಪ್ತವಾಗಿ ತನ್ನ ದೇವರ ಸಮುದಾಯದ ಸಾಮೂಹಿಕ ಪ್ರಾರ್ಥನೆಗೆ ಒಂದು ರೀತಿಯ ಮನರಂಜನೆಗೆ ದಾರಿಯಾಗಿರಬೇಕು. ರಾಗ-ತಾಳದ, ನಾದ-ಲಯದ ವಿನ್ಯಾಸವನ್ನು ಗುರುತಿಸುವ ಮೂಲಕ ಮೇಳ ಕಲ್ಪನೆ ಇನ್ನಷ್ಟು ವಿಸ್ತಾರಗೊಂಡಿತು. ಒಂದು ಮತದ ಸುಭದ್ರ ನೆಲೆಗಟ್ಟಿಗೆ ಇಂಥ ಮೇಳಗಳು ತುಂಬಾ ಅವಶ್ಯಕ.

ಯಾಕೆಂದರೆ ಯಾವುದೇ ತತ್ವ ಕೇವಲ ಬಾಯಿಮಾತಿನಿಂದ ತನ್ನ ಸಾರ್ಥಕತೆಯನ್ನು ತಲುಪಲಾರದು. ಹಾಡಿನ ರೂಪ ಹಾಡುವ ರೀತಿ ಬಹುಜನಕ್ಕೆ ಬಹುಬೇಗನೇ ತಲುಪಬಲ್ಲದು. ಮುಮ್ಮೇಳ ಹಿಮ್ಮೇಳ ಗೇಯಗುಣ ಕುರುಬರ ಮತ ತತ್ವಗಳನ್ನು ಜನಕ್ಕೆ ಪರಿಣಾಮಕಾರಿಯಾಗಿ ತಲುಪಿಸಲು ಸಹಾಯಕಾರಿಯಾದವು. ಇನ್ನು ಆರಂಭದ ಸ್ಥಿತಿಯಲ್ಲಿರುವಾಗಲೇ ಕಾಡಿನಲ್ಲಿ ಹಿಂಸೆಯ ಪ್ರಾಣಿಗಳಿಂದ ರಕ್ಷಿಸಿಕೊಳ್ಳಲು ಸಮೂಹವನ್ನು ಕಟ್ಟಿಕೊಂಡು ಅಲೆಯುವುದು ಈ ಮೇಳ ರಚನೆಗೆ ಪ್ರಮುಖ ಪ್ರೇರಣೆಯಾಗಿರಬಹುದು.

**ಡೊಳ್ಳಿನ ಹಾಡುಗಳ ಸ್ವರೂಪ**

ಡೊಳ್ಳಿನ ಹಾಡುಗಳನ್ನು ದೈವಗಳ ತಾಣಗಳಲ್ಲಿ ಹಾಡಲಾಗುತ್ತದೆ. ದೈವಗಳನ್ನು ತೃಪ್ತಿಗೊಳಿಸುವುದಕ್ಕೆ ಹಾಡುತ್ತೇವೆ ಎನ್ನುವುದು ಹಾಡುಗಾರರ ಭಾವನೆ. ಈ ಭಾವನೆ ಕುಲದೈವಗಳಿಗೆ ಅನ್ವಯ ಆದಂತೆ ಕುಲೇತರರ ದೈವಗಳಿಗೆ ಅನ್ವಯ ಆಗುವುದಿಲ್ಲ. ಹಾಡುಗಾರರು ತಮ್ಮನ್ನು ದೈವಗಳನ್ನು ಸೇವೆ ಮಾಡುವ 'ಸೇವಕರು' ಆಳುಮಕ್ಕಳು ಕರೆದುಕೊಂಡರೆ ದೈವವನ್ನು 'ಒಡೆಯ'ನೆಂದು ಕರೆದುಕೊಳ್ಳುವರು. ಹಾಗಾಗಿ ಡೊಳ್ಳಿನ ಹಾಡುಗಾರಿಕೆಯನ್ನು ದೈವ ಮತ್ತು ಆಳುಮಕ್ಕಳ ನಡುವೆ ನಡೆಯುವ ಸಂವಾದವೆಂದು ಕರೆಯಬಹುದು. ಆಳು ಮಕ್ಕಳೆಂದು ದೇವರ ಪಲ್ಲಕ್ಕಿಯನ್ನು ಹೊತ್ತುಕೊಂಡು ಹೋಗುವ ಸಂಪ್ರದಾಯ ಬೀರಪ್ಪನ ಆರಾಧನೆಯಲ್ಲಿದೆ. ಹುಲಜಂತಿ ಮಾಳಪ್ಪನ ಪಲ್ಲಕ್ಕಿಯನ್ನು ಹೊತ್ತು ತಿಂಗಳುಗಟ್ಟಲೆ ಭಕ್ತರ ಮನೆ ಮನೆಗೆ ಹೋಗಿ ದೇವರ ಸೇವೆ ಮಾಡಿ ಆತಿಥ್ಯ ಸ್ವೀಕರಿಸಿಕೊಂಡು ಬರುತ್ತಾರೆ. ಆ ಸಂದರ್ಭದಲ್ಲಿ ಹಾಡುವ ಹಾಡನ್ನು ಹೀಗಿದೆ.

''ಆಳುಮಕ್ಕಳು ಉಂಡ ಮನ್ಯಾಗ ಹಾಲ ಕಾವಲಿ ಹರಿಯಲಿ
ಅಪ್ಪ ಪೂಜಾರಿ ಉಂಡ ಮನ್ಯಾಗ ತುಪ್ಪದ ಕಾವಲಿ ಹರಿಯಲಿ''

ಈ ಒಡೆಯ ಮತ್ತು ಆಳುಮಕ್ಕಳ ಪರಿಕಲ್ಪನೆ ಅಧ್ಯಯನಕಾರರನ್ನು ಬೇರೆಡೆ ಕರೆದುಕೊಂಡು ಹೋಗುತ್ತದೆ. ಬೀರಪ್ಪ ಮತ್ತು ಮಾಳಿಂಗರಾಯರ ಗುರುಶಿಷ್ಯರ ಸಂಬಂಧ ಒಡೆಯ ಮತ್ತು ಸೇವಕ ಎನ್ನುವ ಭಾವನೆಯಿಂದ ಬೆಳೆದು ಬಂದಿದೆ ಬೀರಪ್ಪನ ಸೇವೆ ಮಾಡುವುದೇ ಮಾಳಿಂಗರಾಯನ ವೃತ್ತಿ ಆಗಿತ್ತು. ಈ ಸಂಬಂಧ ಅಥವಾ ವೃತ್ತಿ ಗುರು ಶಿಷ್ಯರ ಸಂಬಂಧಕ್ಕಿಂತ ಭಿನ್ನವಾದುದು ಈಗಲೂ ಮಾಳಿಂಗರಾಯನ ವಂಶಸ್ಥರು ಬೀರಪ್ಪನ ಸೇವೆ ಮಾಡುವುದು ಪಾರಂಪರಿಕ ವೃತ್ತಿಯೆಂದುಕೊಂಡಿದ್ದಾರೆ. ಇವರನ್ನು ಪೂಜಾರಿಗಳೆಂದು ಕರೆಯುವರು. ಇವರು ಬೀರಪ್ಪನ ಹೆಸರಿನಲ್ಲಿ ದೀಕ್ಷೆ ತೆಗೆದುಕೊಳ್ಳುವರು. ಈ ಪೂಜಾರಿಗಳು ಹೆಚ್ಚಾಗಿ ಡೊಳ್ಳಿನ ಹಾಡುಗಳನ್ನು ಹಾಡುತ್ತಾರೆ. ಇವರಿಗೆ ಹಾಡುಗಳ ಪ್ರದರ್ಶನಗಳಲ್ಲಿ ಸ್ಪರ್ಧೆಗಳಲ್ಲಿ ವಿಶೇಷವಾದ ಗೌರವ. ಇವರು ಬೀರಪ್ಪನ ಮನೆಯ ಸೇವಕರು. ಹೀಗಾಗಿ ಹಾಲುಮತದ ಚರಿತ್ರೆ ಚೆನ್ನಾಗಿ ತಿಳಿದಿದೆ ಎನ್ನುವುದು ಉಳಿದ ಕಲಾವಿದರ ನಂಬಿಕೆ. ಪೂಜಾರಿಗಳಲ್ಲದೆ ಈರಗಾರರು ಡೊಳ್ಳಿನ ಹಾಡುಗಳನ್ನು ಹಾಡುತ್ತಾರೆ. ಈರಗಾರರು ಪೂಜಾರಿಗಳಂತೆ ಬೀರಪ್ಪನ ಹೆಸರಿನಲ್ಲಿ ದೀಕ್ಷೆ ತೆಗೆದುಕೊಳ್ಳುವರು ಮತ್ತು ಸೇವಕರಾಗಿ ಕಾರ್ಯನಿರ್ವಹಿಸುವರು

''ಡೊಳ್ಳನೀರಿನ ಕರಿಸ್ಯಾನ ನಿಂಗಣ್ಣ ಡೊಳ್ಳ ಕೈಯಲ್ಲಿ ಕೊಟ್ಟಾನ
ತಾಳದೀರನ ಕರಿಸ್ಯಾನ ನಿಂಗಣ್ಣ ತಾಳ ಕೈಯಲ್ಲಿ ಕೊಟ್ಟಾನ
ಕೊಳಲದೀರನ ಕರಿಸ್ಯಾನ ನಿಂಗಣ್ಣ ಕೊಳಲ ಕೈಯಲ್ಲಿ ಕೊಟ್ಟಾನ
ಈ ಬತ್ತಿಪಟ್ಟಿನ ಈರನ ಕರಿಸ್ಯಾನ ಪುಟ್ಟಡಿ ದಟ್ಟಲುಡಿಸ್ಯಾನ
ನಿಶಾನಿ ಈರನ ಕರಿಸ್ಯಾನ ನಿಂಗಣ್ಣ ನಿಶಾನಿ ಏರಿಸಿರಂದಾನ
ಇಷ್ಟೆ ಮಂದಿ ಈರರು ಕೂಡಿ ಏಣಕಲ್ಲಪ್ಪಗ ನಡದಾರ
ನೂರೊಂದು ಈರರು ಕೂಡಿದ ಬೈಲಾಗ ಹಾಡಂದಾರ ನಿಂಗಣ್ಣನ
ಹಾಡಲಾರೆನೂ ಹರೆಸಲಾರೆನೋ ಬೇಡಲಾರೆನೂ ನಿಮ ಚಾಜವನು''

ಹಿಂದೆ ಹಾಡುಗಳನ್ನು ಹಾಡುವುದಕ್ಕೆ ಈರಗಾರರೆಲ್ಲರು ಸೇರುತ್ತಿದ್ದರು ಇಲ್ಲಿ ಬಳಕೆ ಆಗಿರುವ 'ದಟ', 'ನಿಶಾನಿ', 'ದಟ್ಟಿಲು' ಅನೇಕ ಪದಗಳ ಬಳಕೆ ವಿಶೇಷ ಗಮನಸೆಳೆಯುತ್ತವೆ. 'ನಿಶಾನಿ' ಎಂದರೆ ಬಾವುಟ, ಧ್ವಜ ಎಂದರ್ಥ ದಟ್ಟಿಲು ಕೈಪಟ್ಟು ವಾದ್ಯದೊಡನೆ 'ಕೆಂಪು' ಸಮವಸ್ತ್ರ ಧರಿಸಿ ಲಾಗಹಾಕಿ ಮಾಡುವ ಕುಣಿತ ಎನ್ನಲಾಗುತ್ತದೆ.

**ವಾಘೆ ಮುರಳಿ**

ಮರಾಠಿಯಲ್ಲಿ 'ವಾಘ್ಯಾ' ಎಂದರೆ ಕನ್ನಡದಲ್ಲಿ 'ಗೊರವ' ಎಂದರ್ಥ. ಇಂಡಿ ತಾಲೂಕಿನಲ್ಲಿ 'ವಗ್ಗ್ಯಾರು' ಎಂದು ಕಂಡುಬರುತ್ತಾರೆ. ವಾಘೆ ಮುರಳಿ ಮಹಾರಾಷ್ಟ್ರಮೂಲದ ಈ ಕುಣಿತ ಉತ್ತರ ಕರ್ನಾಟಕದಲ್ಲಿರುವ ಇಂಡಿ ತಾಲೂಕಿನ ಲಾಳಸಂಗಿ, ದಸೂರ, ಚಡಚಣ, ಸಂಕ, ಹತ್ತಳ್ಳಿ, ಈ ಗ್ರಾಮಗಳಲ್ಲಿಯೂ ವಿರಳವಾಗಿ ಕಂಡುಬರುತ್ತಾರೆ. ಇದನ್ನು ''ಖಂಡೋಬಾನ ಮುರಳಿ'' ಎನ್ನುತ್ತಾರೆ. ಇವರಿಬ್ಬರೂ ದೇವರಿಗೆ ಅರ್ಪಿತವಾದ ಗಂಡು ಹೆಣ್ಣುಗಳು ಈ ಕುಣಿತದ ಮೇಳದಲ್ಲಿ ಸಾಮಾನ್ಯವಾಗಿ ಮೂರು ಮಂದಿ ಮುರಳಿಯವರು ಇಬ್ಬರು ವಾಘೆಯವರು ಇರುತ್ತಾರೆ. ವಾಘೆಯವರು ಹಿಮ್ಮೇಳದವರಾಗಿ ದಮಡಿ, ತಾಳಗಳನ್ನು ನುಡಿಸುತ್ತಾರೆ. ಇವರ ಜೊತೆಯಲ್ಲಿಯೇ ಮುಮ್ಮೇಲದವರು ಹಾಡಿದಂತಹ ಹಾಡನ್ನು ಹಾಡಿನ ಪಲ್ಲವಿಯನ್ನು ಎತ್ತಿಕೊಳ್ಳುವರು. ಮುರಳಿಯವರು ಸೀರೆ, ಕುಪ್ಪಸ, ತೊಟ್ಟು ಹಣೆಗೆ ಬೊಟ್ಟು ಅರಿಶಿಣ ಕುಂಕುಮದ ಅಡ್ಡಗೆರೆ ಬಲಗೈಯಲ್ಲಿ ವಸ್ತ್ರಕ್ಕೆ ಕಟ್ಟಿರುವ ಚಿಕ್ಕ ಗಂಟೆಯನ್ನು ಹಿಡಿದು ತಮ್ಮ ತಂಡದೊಂದಿಗೆ ಮನೆ ಮನೆಗೆ ಭಿಕ್ಷಾಟನೆಯನ್ನು ಮಾಡುತ್ತಾರೆ.

ಹೀಗೆ ಕುಣಿತ ಮುಂದುವರೆಯುತ್ತಿದ್ದಂತೆಯೇ ನೋಡುಗರು ಮೋಜಿಗಾಗಿ ಕಟ್ಟಿಯ ತುದಿಯ ಮೇಲೆ ನಾಣ್ಯವನ್ನುವಿಡುತ್ತಾರೆ. ಅದನ್ನು ಹಣೆಯಿಂದ ತೆಗೆದುಕೊಳ್ಳಬೇಕಾದುದು ಮುರಳಿಯವರ ಸಂಪ್ರದಾಯವಾಗಿದೆ. ಈ ಸಂದರ್ಭದಲ್ಲಿ ರಸಿಕರಾದವರು ತಮ್ಮ ರಸಿಕತೆಯಿಂದ ಮುರಳಿಯ ಮುಡಿಯ ಮೇಲೆ ಬೇರೊಂದು ನಾಣ್ಯವನ್ನಿಡುತ್ತಾರೆ. ಅದನ್ನು ಮತ್ತೊಬ್ಬರು ತೆಗೆಯುವುದಕ್ಕೆ ಬಾಗಿದರೆ ಅವಳ ಮುಡಿಯ ಮೇಲೆ ನಾಣ್ಯ ಬೀಳುತ್ತದೆ. ಹೀಗೆ ಇವರನ್ನು ಕುಚೇಷ್ಟೆಯಿಂದ ಕಾಡಿಸುತ್ತಾ ಮುಂದುವರೆಸುತ್ತಾರೆ. ಮುರಳಿಯವರು ಹಣವನ್ನು ಸಂಪಾದಿಸುವುದಕ್ಕೋಸ್ಕರ ಮರಾಠಿ ಹಾಡುಗಳನ್ನು ಹಾಡಿದರೂ ಸಹ ಇವರ ಹಾಡುಗಳಲ್ಲಿ ಅಶ್ಲೀಲವಾಗಿರುವುದು.

**ಕುರುಬರ ಹಟ್ಟಿ ಆಟ**

ಇದರ ಹೆಸರೇ ಹೇಳುವಂತೆ ಇದನ್ನು ಕುರುಬರೇ ಪ್ರದರ್ಶಿಸುವಂತಹ ಕುಣಿತವಾಗಿದೆ. ಇದು ಬಿಜಾಪುರ ಜಿಲ್ಲೆಯ ಸುತ್ತಮುತ್ತಲ ಹಲವು ತಾಲೂಕುಗಳಲ್ಲಿ ಕಂಡುಬರುತ್ತದೆ. ಈ ಕುಣಿತಕ್ಕೆ ಸಂಬಂಧಿಸಿದಂತೆ ಕೆಲವು ಪುರಾಣಗಳಿವೆ.

ಪುರಾಣ-೧ ಭಸ್ಮಾಸುರನೆಂಬ ಶಿವ ಉರಿಹಸ್ತ ಕರುಣಿಸಿದ ಈ ಪ್ರಕಾರ ಆತಯಾರ ತಲೆಯ ಮೇಲೆ ಕೈಯಿಡುತ್ತಾನೆಯೋ ಆತನ ತಲೆ ಸುಟ್ಟು ಹೋಗುತ್ತದೆ. ಇಂತಹ ಭಸ್ಮಾಸುರನನ್ನು ಕೊಲ್ಲಲು ಶಿವ ಮೋಹಿನಿಯ ರೂಪದಲ್ಲಿ ದಟ್ಟಿಸೀರೆಯುಟ್ಟು ಅವತರಿಸಿ ಭಸ್ಮಾಸುರನನ್ನು ಕೊಂದನು.

ಪುರಾಣ-೨ ಇನ್ನೊಂದು ಕತೆಯ ಪ್ರಕಾರ ಶುಂಭ ನಿಶುಂಭರು, ಹೆಣ್ಣಿನಿಂದ ಮಾತ್ರ ತಮಗೆ ಮರಣ ಬರುವಂತೆ ಬ್ರಹ್ಮನಿಂದ ವರ ಪಡೆದರು. ಆಗ ಪಾರ್ವತಿ ಶಕ್ತಿಯ ಅವತಾರ ತಾಳಿ ದಟ್ಟ ತೊಟ್ಟು ಕುಣಿದಳು.

ಈ ದಟ್ಟಿ ಆಟದಲ್ಲಿ ೧೫-೨೦ ಜನ ಕಲಾವಿದರಿರುತ್ತಾರೆ. ಇದರಲ್ಲಿ ೪-೬ಜನ ವಾದ್ಯಕಾರರು, ಕೈಪಟ, ತಾಳ ಗುಮಿಕೆಗಳು ಈ ಮೇಳಕ್ಕೆ ಬೇಕಾಗುವ ವಾದ್ಯ ವಿಶೇಷಗಳು ಕೈಪಟವನ್ನು ಕೊರಳಿಗೆ ಹಾಕಿಕೊಂಡು ನುಡಿಸಲಾಗುತ್ತದೆ. ಇದರೊಂದಿಗೆ ಶೃತಿ ಸನಾದಿಗಳೂ ಇರುವುವು.

ಕಲಾವಿದರು ಕೆಂಪು ನಿಲುವಂಗಿ, ಕೆಂಪು ಪೈಜಾಮ, ತೊಟ್ಟು ಸೊಂಟದಿಂದ ಮೊಣಕಾಲಿನವರೆಗೆ ನೆರಿಗೆ ಮಾಡಿದ ಬಣ್ಣದ ಸೀರೆ ಅಂಗಿಯ ಮೇಲೆ ಕುತ್ತಿಗೆಯಿಂದ ಇಳಿಬಿಟ್ಟ ಕೆಂಪಂಚಿನ ದೊಡ್ಡ ದಡಿ ದೋತ್ರ, ನಡುಕಟ್ಟು, ರುಮಾಲು, ಕೈಗಳಲ್ಲಿ ಉದ್ದನೆಯ ವಸ್ತ್ರ, ಕಾಲಿಗೆ ಗೆಜ್ಜೆ, ಕೊರಳಿಗೆ ಸರಮಾಲೆ, ಮುಖಹಣೆ, ಗಲ್ಲಗಳಿಗೆ ಭಂಡಾರ, ಅರಿಶಿಣ ಇವು ಅವರ ವೇಶಭೂಷಣಗಳಾಗಿವೆ.

ಹಿಮ್ಮೇಳ ನುಡಿಸುತ್ತಿದ್ದಂತೆಯೇ ಕುಣಿತ ಆರಂಭವಾಗುತ್ತದೆ. ೪ ೫ ಜನ ಕಲಾವಿದರಿದ್ದಾಗ ಒಬ್ಬರಿಗೊಬ್ಬರು ಸಮೀಪದಲ್ಲಿಯೇ ನಿಂತು ಕುಣಿಯುವವರಾದರೆ, ಹೆಚ್ಚಿನ ಸಂಖ್ಯೆಯಲ್ಲಿ ಕಲಾವಿದರಿದ್ದಾಗ ಎದುರು ಸಾಲು ರಚಿಸಿಕೊಳ್ಳುತ್ತಾರೆ.

ಎಡಕ್ಕೆ ಎರಡೆಜ್ಜೆ, ಬಲಕ್ಕೆ ಎರಡೆಜ್ಜೆ ಮುಂದಕ್ಕೆ ಮೂರಜ್ಜೆ ಮತ್ತು ಜಿಗಿತಗಳು, ಸಾಲುಕಟ್ಟಿ ಕುಣಿತ, ಅಡ್ಡಕುಣಿತ, ದುಂಡು ಕುಣಿತ ಅನೇಕ ಕುಣಿತದ ಬಗೆಗಳನ್ನು ಪ್ರದರ್ಶಿಸುತ್ತಾರೆ.

ಜಾತ್ರೆ, ಉತ್ಸವ, ಮದುವೆ, ಮೆರವಣಿಗೆ, ಗುಗ್ಗಳೋತ್ಸವಗಳ ಸಂದರ್ಭದಲ್ಲಿ ದಟ್ಟಿ ಕುಣಿತವು ನಡೆಯುತ್ತದೆ. ಮತ್ತು ದೇವರ ಪಲ್ಲಕ್ಕಿಗಳು ಮತ್ತೊಂದು ಗ್ರಾಮದ ಜಾತ್ರೆಗಳಿಗೆ ಹೊರಟಾಗ ಈ ಕಲಾವಿದರು ಸಾಮಾನ್ಯವಾಗಿ ಜೊತೆಯಲ್ಲಿದ್ದುಕೊಂಡು ಕುಣಿತ, ಹಾಡು, ಒಡಬು, ಕಥೆಗಳನ್ನು ಹೇಳುತ್ತಾ ಸಮಯವನ್ನು ಕಳೆಯುತ್ತಾ ನಡೆಯುವರು.

ಈ ಕುಣಿತವು ಇಂಡಿ ತಾಲೂಕಿನ ಗ್ರಾಮಗಳಲ್ಲಿ ಕಂಡುಬರುವುದಿಲ್ಲವಾದರೂ ನೆರೆಯ ಮಹಾರಾಷ್ಟ್ರರಾಜ್ಯದಲ್ಲಿನ ಗಡಿಯಲ್ಲಿರುವ ಗ್ರಾಮಗಳಲ್ಲಿ ಇಂತಹ ಆಟಗಳನ್ನು ಕಾಣಬಹುದು.

**೪.೨. ತೇರಿನ ವೈಶಿಷ್ಟ್ಯ**

''ಜಾತ್ರೆಗಳಲ್ಲಿ ದೇವರ ಮೆರವಣಿಗೆಗೆ ಆದ್ಯತೆ. ಉತ್ಸವ ಮೂರ್ತಿಯನ್ನು ಪಲ್ಲಕ್ಕಿಯಲ್ಲಿ ಅಥವಾ ತೇರಿನಲ್ಲಿಟ್ಟು ಜಗ್ಗವರು. ತೇರಿಗೆ ಆಧ್ಯಾತ್ಮಿಕ ಸಂಕೇತವು ಕೂಡಾ ಬಂದಿದೆ. ತೇರು ದೇಹಕ್ಕೆ ಪ್ರತೀಕ. ಸ್ಥೂಲ ಸೂಕ್ಷ್ಮ ಕಾರಣ ಶಹರಗಳಿಂದ ಕೂಡಿದ ದೇಹದಂತಿರುವ ಈ ತೇರಿಗೂ ಮೂರು ಭಾಗ''ಗಳಿರುತ್ತವೆ.

''ತೇರನ್ನು ಬಂಡಿ, ರಥ, ಕುರ್ಚಿ ಅಥವಾ ವ್ಯಾನ, ಎಂಬ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಇತ್ತೀಚೆಗೆ ಇಂಗ್ಲೀಷ ಗಾಳಿ ಇದಕ್ಕೂ ಬೀಸಿ ಕಾರ್ ಎಂದು ಹೇಳುತ್ತಿದ್ದಾರೆ. ರಥೋತ್ಸವ ಅಥವಾ ತೇರನ್ನು ''ಕಾರ್ ಫೆಸ್ಟಿವಲ್'' ಎಂದು ಉಲ್ಲೇಖಿಸುತ್ತಿದ್ದಾರೆ. ಈ ತೇರು ಕೂಡಾ ಒಂದು ವಾಹನದಂತಿದೆ. ಕಾರು ಬಂಡಿಗಾಡಿ, ಮನುಷ್ಯರ ವಾಹನವಾದರೆ, ತೇರು ದೇವರ ವಾಹನ ವಾಸ್ತವವಾಗಿ ಹೇಳಬೇಕೆಂದರೆ, ಈ ಪದದ ಮೂಲ ಅರ್ಥ

ಕೇವಲ ''ಒಂದು ಬಗೆಯ ವಾಹನ ಎಂದೆಷ್ಟೇ ಇತ್ತು. ತೇರು ಎಂಬುದು ಅಚ್ಚ ದ್ರಾವಿಡ ಶಬ್ದವಾಗಿದೆ.[೨] ಕನ್ನಡ ಆದಿ ಕವಿ ಪಂಪ-ರನ್ನರೇ ಈ ಶಬ್ದವನ್ನು ಬಳಸಿದ್ದಾರೆಂದ ಮೇಲೆ ತೇರಿನ ಪ್ರಾಚೀನತೆಯನ್ನು ತಿಳಿದುಕೊಳ್ಳಬಹುದು. ಕೃಷ್ಣನು ಇದರಲ್ಲಿ ಕುಳಿತಿದ್ದರಿಂದ ಮುಂದೆ ತೇರು ಎಂದರೆ ದೇವರು ಕೂಡುವ, ದೇವತಾ ವಿಗ್ರಹವನ್ನಿಟ್ಟು ಎಳೆಯುವ ಅಲಂಕಾರದ ಬಂಡಿ ಎಂಬರ್ಥ ರೂಢಿಗೆ ಬಂದಿರಬಹುದಾಗಿದೆ. ಕ್ರಮೇಣ ತೇರು ಎಂದರೆ ರಥೋತ್ಸವ ಎಂಬರ್ಥವೂ ಕೂಡಾ ಸಹಜವಾಗಿ ಬಂದಿರುತ್ತದೆ.''[೩] ಈ ಮೇಲಿನ ಅಂಶಗಳಲ್ಲಿ ತೇರಿನ ಪ್ರಾಚಿನತೆ ಮತ್ತು ಸಂಕೇತದ ಕುರಿತು ವಿದ್ವಾಂಸರು ಸಮರ್ಪಕವಾಗಿ ಹೇಳಿದ್ದು. ಅಲ್ಲದೇ ಉತ್ತರ ಕರ್ನಾಟಕದ ಅದರಲ್ಲೂ ವಿಶೇಷವಾಗಿ ಬಿಜಾಪೂರ ಜಿಲ್ಲೆಯ ಇಂಡಿ ತಾಲೂಕಿನಲ್ಲಿ ವೈವಿದ್ಯತೆಯಿಂದ ಕೂಡಿದ ತೇರುಗಳ ಹಾಗೂ ಅವುಗಳ ಉತ್ಸವ ರಂಜಿಸುವಂತೆ ಜರುಗುವುದು ಈ ತಾಲೂಕಿನ ಜನರಿಗೆ ಹೆಮ್ಮೆಯ ವಿಷಯವಾಗಿದೆ.

**ತೇರಿನ ವರ್ಗೀಕರಣ**

ಬಿಜಾಪೂರ ಜಿಲ್ಲೆಯ ಇಂಡಿ ತಾಲೂಕಿನಲ್ಲಿ ಕಂಡುಬರುವ ತೇರುಗಳನ್ನು ನಾಲ್ಕು ಪ್ರಕಾರಗಳಾಗಿ ವಿಂಗಡಿಸಬಹುದು.

೧. ಗಡ್ಡಿಯ ತೇರು

೨. ಹಂದರದ ತೇರು

೩. ಕಬ್ಬಿಣದ ತೇರು

೪. ತೆಪ್ಪದ ತೇರು

**೧. ಗಡ್ಡಿಯ ತೇರು**

ಈ ಗಡ್ಡಿಯ ತೇರಿನಲ್ಲಿ ಕೆಳಗೆ, ಮಧ್ಯ, ತುದಿಯ ಭಾಗಗಳನ್ನಾಗಿ ವಿಂಗಡಿಸಬಹುದು. ಕೆಳಗಿನ ಭಾಗದಲ್ಲಿ ಗಾಲಿಗಳು ಮತ್ತು ಪೀಠವಿರುತ್ತದೆ. ಕೆಳಗಿನ ಭಾಗದ ದಿಂಡುಗಳಿಗೆ ಮಿಣಿಕಟ್ಟಲು ಉಪಯೋಗಿಸುವ ದಪ್ಪವಾದಂತಹ ಮತ್ತು ಅಗಲವಾದ ಕಬ್ಬಿಣದ ಬಳೆಗಳಿರುತ್ತವೆ.

ಕೆಲವು ತೇರುಗಳಿಗೆ, ಮರದ ಹಲಗೆಗಳನ್ನು ಒಂದಕ್ಕೊಂದು ಜೋಡಿಸಿ ಕಬ್ಬಿಣದ ಪಟ್ಟಿಯನ್ನು ಹೊಡೆದು, ದಪ್ಪ ಗಾತ್ರದಲ್ಲಿ ಮಾಡಿದ ಗಾಲಿಗಳಿದ್ದರೆ, ಕೆಲವು ತೇರುಗಲಿಗೆ ಬೃಹತ್ ಆಕಾರದ ದಪ್ಪವಾದ ಕಲ್ಲಿನ ಗಾಲಿಗಳಿರುತ್ತವೆ. ತೇರಿನ ಮಧ್ಯಭಾಗ ಕೆಳಭಾಗಕ್ಕಿಂತ ವಿಶಾಲವಾಗಿ ಹೊರಡುತ್ತಾ ಗೋಪುರಾಕಾರ ತಾಳುತ್ತದೆ. ಈ ಭಾಗದಲ್ಲಿ ಚಿಕ್ಕ ಕೋಣೆಗಳಿದ್ದು, ಒಂದೊಂದು ಅಂತಸ್ತಿನಲ್ಲಿ ಸುಮಾರು ಹತ್ತು, ಆರು, ಮೂರು ಜನರು ನಿಲ್ಲಲು ಮತ್ತು ಕೂಡಲು ಕಳಸವನ್ನು ತೆಗೆದುಕೊಂಡು ಗೋಪುರಕ್ಕೆ ಹೋಗುವಂತೆ ಪೊಳ್ಳಾಗಿ ನಿರ್ಮಾಣ ಮಾಡಿರುತ್ತಾರೆ. ಈ ಭಾಗದ ಹೊರಮೈಯಲ್ಲಿ ದೇವರ ಪ್ರಾಣಿ-ಪಕ್ಷಿಗಳ, ಗಿಡ-ಬಳ್ಳಿಗಳ ಮತ್ತು ಲೈಂಗಿಕ ಸಾಕ್ಷ ಚಿತ್ರಗಳನ್ನು ಸೂಕ್ಷ್ಮವಾಗಿ ವಿನ್ಯಾಸ ಮಾಡಿರುತ್ತಾರೆ.

ತೇರು ಸುಮಾರು ೨೫-೪೫ ಅಡಿ ಎತ್ತರವಾಗಿರುವ ಕಾರಣದಿಂದ ಇದರ ಮಧ್ಯೆ ಜಾಗದಲ್ಲಿ ೩-೪ ಅಂಗುಲ ದಪ್ಪವಿರುವ ಗೋಲಾಕಾರವಾಗಿ ಅಥವಾ ಚೌಕಾಕಾರವಾಗಿ ಕಬ್ಬಿಣದ ಹಾರಿಗಳನ್ನು ಬಳಸುತ್ತಾರೆ. ಏಕೆಂದರೆ ರಥವನ್ನು

ಜಗ್ಗುವಂತಹ ಸಮಯದಲ್ಲಿ ಎಷ್ಟೇ ಅಲುಗಾಡಿಸಿದರೂ ಮುರಿಯದಂತೆ ಈ ಹಾರಿಗಳು ಸಮತೋಲನವನ್ನು ಕಾಪಾಡಿಕೊಡುತ್ತವೆ.

ತೇರಿನ ಮತ್ತೊಂದು ಭಾಗವಾದ ತುದಿಯ ರಚನೆಯ ಮಧ್ಯೆ ಭಾಗದಿಂದ ಅಗಲದಲ್ಲಿ ಕಡಿಮೆಯಾಗುತ್ತಾ ಬಂದುದರಿಂದ ಮತ್ತು ಕಿರಿದಾಗುವ ಕಾರಣದಿಂದ ತೇರು ಗೋಪುರದಂತೆ ಕಾಣುತ್ತದೆ. ಕೊನೆಗೆ ಎಲ್ಲಕ್ಕಿಂತ ಮೇಲೆ ಕಳಸವನ್ನಿಡುತ್ತಾರೆ. ಇಂತಹ ತೇರುಗಳನ್ನು ಕಟ್ಟಿಗೆಯಲ್ಲಿ ನಿರ್ಮಾಣ ಮಾಡುವುದರಿಂದ ಧೀರ್ಘಕಾಲದವರೆಗೆ ಬಾಳಿಕೆ ಬರುತ್ತದೆಯಲ್ಲದೇ ಇದು ಶ್ರೇಷ್ಠವೆಂಬ ನಂಬಿಕೆ ಜನರಲ್ಲಿ ಬಲವಾಗಿ ಮಾಡಿದೆ.

ಇಂತಹ ಬೃಹತ್ ಆಕಾರದ ಗಡ್ಡಿಯ ತೇರುಗಳನ್ನು ನಿರ್ಮಾಣ ಮಾಡಿದ ನಂತರ ಸಂರಕ್ಷಿಸಿಡಲು ದೇವಸ್ಥಾನದ ಮುಂದೆ ಕೊಠಡಿಯನ್ನು ಮಾಡಿರುತ್ತಾರೆ. ಇದಕ್ಕೆ ತೇರಿನ ಮನೆ ಎನ್ನುತ್ತಾರೆ. ಇಂತಹ ಗಡ್ಡಿಯ ತೇರುಗಳು ಇರುವಂತಹ ತಾಲೂಕಿನ ಮತ್ತು ಅಕ್ಕಪಕ್ಕದಲ್ಲಿನ ತಾಲೂಕಿನ ಜಾತ್ರೆಗಳಾದ ಗೋಳಸಾರ, ಲಚ್ಯಾಣ, ಗೊಲಗೇರಿ, ಯಂಕಂಚಿ, ದೇವರ ಹಿಪ್ಪರಗಿ, ದೇವರನಿಂಬರಗಿ ಕನ್ನೂರ, ಚಿಕ್ಕ, ಸಂಗಮ, ಕಕ್ಕಳಮೇಲಿ ಇವುಗಳಲ್ಲಿ ಕೆಲವೊಂದು ಹಾಲುಮತ ದೇವಸ್ಥಾನಗಳು ಮತ್ತು ಇನ್ನೂಳಿದಂತಹುಗಳು ಬೇರೆ ಸಮುದಾಯಗಳ ತೇರುಗಳು ಈ ಪ್ರದೇಶದ ಜಾತ್ರೆಗಳಲ್ಲಿ ಕಂಡುಬರುತ್ತವೆ.

**೨. ಹಂದರ ತೇರು**

ಈ ವಿಶೇಷ ತೇರು ತಾಲೂಕಿನ ಜಾಡರ ಬಬಲಾದಿ, ಕಳ್ಳ ಬಬಲಾದಿ ಮತ್ತು ಚವಡಿಹಾಳ ಜಾತ್ರೆಗಳಲ್ಲಿ ಕಂಡುಬರುತ್ತದೆ. ಹಂದರ ಎಂದರೆ ''ಗಾಡಿಯ ಚೌಕಟ್ಟು, ಒಳತೊಟ್ಟಿಲು''⁶ ಎನ್ನುವ ವಿವರಣೆ ಕನ್ನಡ ನಿಘಂಟಿನಲ್ಲಿದೆ. ಈ ರಥದ ಕೆಳಗಿನ ಭಾಗವಷ್ಟನ್ನೇ ಗಡ್ಡಿಯ ತೇರಿನ ಆಕೃತಿಯನ್ನು ಮಾತ್ರ ಹೊಂದಿರುತ್ತದೆ. ಆದರೆ ಇದರ ಗಾಲಿಗಳು ಒಕ್ಕುಲುತನಕ್ಕೆ ಸಂಬಂಧಪಟ್ಟಂತೆ ಇರುತ್ತವೆ. ಮಧ್ಯೆಭಾಗ ಮತ್ತು ಗೋಪುರದ ತೇರಿನ ಭಾಗವನ್ನು ಎಳೆಯುವುದಕ್ಕೆ ಮುಂಚೆ ಗ್ರಾಮದ ಜನರೆಲ್ಲಾ ಸೇರಿ ಬನ್ನಿ ಗಿಡದ ಕಟ್ಟಿಗೆಯಿಂದ ಇದಕ್ಕಿದ್ದ ಹಳೆಯ ಕಟ್ಟಿಗೆಗಳೊಂದಿಗೆ ಕೂಡಿಸಿ ಹಂದರದ ತೇರನ್ನು ಸಿದ್ಧಪಡಿಸುತ್ತಾರೆ. ನಂತರ ಇದಕ್ಕೆ ಹೊಸ ಹಸಿರು ಸೀರೆಗಳಿಂದ ತೇರಿಗೆ ಸುತ್ತಿ ಅಲಂಕರಿಸುತ್ತಾರೆ. ಮತ್ತು ಇದಕ್ಕೂ ಕೂಡಾ ಗೋಪುರದ ಮೇಲೆ ಕಳಸವನ್ನಿಡುತ್ತಾರೆ. ಇದು ಮಹಾಭಾರತದ ಪೌರಾಣಿಕ ಹಿನ್ನೆಲೆಯನ್ನು ಅನುಸರಿಸಿಕೊಂಡು ಬನ್ನಿಕಟ್ಟಿಗೆಗಳನ್ನು ಬಳಸಿದರೆ, ಸಿದ್ಧಟಿಕೆ ಮಠಗಳ ಪರಂಪರೆಯಂತೆ ರಥಕ್ಕೆ ಸೀರೆ ಸುತ್ತುವುದು ಕೂಡಾ ಒಂದು ವೈಶಿಷ್ಟ್ಯವಾಗಿದೆ.

**೩. ಕಬ್ಬಿಣದ ತೇರು**

ಗಡ್ಡಿಯ ತೇರಿನ ನಿರ್ಮಾಣ ಮತ್ತು ಸಂರಕ್ಷಣೆಯು ಕಷ್ಟದ ಕೆಲಸವಾಗಿದ್ದರಿಂದಲೋ! ಆಧುನಿಕತೆಯ ಪ್ರಭಾವವದಿಂದಾಗಿ ಕಬ್ಬಿಣದ ತೇರುಗಳ ನಿರ್ಮಾಣ ಆಗಿರುವುದು ಕಂಡುಬರುತ್ತದೆ. ಬಿಜಾಪೂರ ಜಿಲ್ಲೆಯಲ್ಲಿ ಕಬ್ಬಿಣದ ತೇರು 'ವಡವಡಗಿ' ತಾ ಸಿಂದಗಿ ಶ್ರೀ ಗುರುಸಿದ್ದೇಶ್ವರ ಮಠದವರು ನಿರ್ಮಾಣ ಮಾಡಿದ್ದಾರೆ.

ನನ್ನ ಅಭಿಪ್ರಾಯದಂತೆ ಪ್ಲಾಸ್ಟಿಕ ಯುಗವೆಂದೇ ಕರೆಯಿಸಿಕೊಳ್ಳುವ ಇತ್ತೀಚಿನ ದಿನಗಳಲ್ಲಿ ಪ್ಲಾಸ್ಟಿಕ್ ಬಳಕೆ ಪ್ರತಿಯೊಂದರಲ್ಲಿಯೂ ಮುಂಚೂಣಿಯನ್ನು ಸಾಧಿಸುತ್ತಾ ಹೊರಟಿದೆ. ಬಹುಶಃ ಮುಂದಿನ ಕೆಲವೇ

ದಿನಗಳಲ್ಲಿ ಪ್ಲಾಸ್ಟಿಕ್ ತೇರುಗಳು ನಿರ್ಮಾಣ ಆಗುವ ಸಾಧ್ಯತೆಗಳಿವೆಯೆಂದು ಹೇಳಲು ಯಾವ ಸಂದೇಹ ವಿಲ್ಲವೆಂದು ಕಂಡುಬರುತ್ತದೆ.

**೪. ತೆಪ್ಪದ ತೇರು**

ತೆಪ್ಪ ಎಂದರೆ ನೀರಿನ ಮೇಲೆ ತೇಲುವ ವಸ್ತು. ತೆಪ್ಪದಿಂದ ನಿರ್ಮಾಣ ಮಾಡಿದ ತೇರನ್ನು ನೆಲಕ್ಕೆ ಬದಲಾಗಿ ನೀರಿನಲ್ಲಿಯ ''ಮಡು'' ಅಥವಾ ಕೆರೆ ಹೊಳೆ, ಹಳ್ಳಗಳಲ್ಲಿ ಎಳೆಯುತ್ತಾರೆ. ಇದನ್ನು ಬಾಳೆದಿಂಡಿನ ತೆಪ್ಪಕಟ್ಟಿ ಅಲಂಕರಿಸಿ ಮಂಚದಂತೆ ಮಾಡುತ್ತಾರೆ. ಈ ತೇರಿನಲ್ಲಿ ದೇವರ ಮೂರ್ತಿಯ ಜೊತೆಗೆ ಪೂಜಾರಿಯು ಕುಳಿತಿರುತ್ತಾನೆ. ಸಾಮಾನ್ಯವಾಗಿ ಇಂತಹ ಉತ್ಸವಗಳು ಸಂಜೆ ಹೊತ್ತಿನಲ್ಲಿ ಜರುಗುತ್ತವೆ. ದೇವರು ಜಾತ್ರೆಯ ಸಮಯದಲ್ಲಿ ದಣಿದಿರುತ್ತಾನೆ. ಮತ್ತು ಅವನ ಮೈಮೇಲಿನ ಧೂಳು. ಮತ್ತು ಮೈನೋವಿನ ನಿವಾರಣೆಗಾಗಿ ಕೆರೆಯಲ್ಲಿ ತೆಪ್ಪೋತ್ಸವ ನಡೆಸಬೇಕೆಂಬ ಜನರ ನಂಬಿಕೆಯಾಗಿದೆ." ಶ್ರಾವಣ ಮಾಸದಲ್ಲಿ ಜರುಗುವ ಇಂತಹ ಉತ್ಸವಗಳು ನಮ್ಮ ತಾಲ್ಲೂಕಿನಲ್ಲಿ ಇಲ್ಲವಾದರೂ ಪಕ್ಕದ ಬದಾಮಿಯ ಬನಶಂಕರಿ ಮತ್ತು ಪಾರ್ವತಿ ಕೇರಿವೀರಭದ್ರೇಶ್ವರ ಜಾತ್ರೆಗಳಲ್ಲಿ ಕಂಡುಬರುತ್ತವೆ.

**ತೇರಿನ ಅಲಂಕಾರ ಮತ್ತು ಆಚರಣೆ**

ಬಿಜಾಪೂರ ಜಿಲ್ಲೆಯ ಇಂಡಿ ತಾಲೂಕಿನಲ್ಲಿ ತೇರುಗಳನ್ನು ತೇರಿನ ಮನೆಯಿಂದ ಹೊರಗೆ ತೆಗೆದು, ಸ್ವಚ್ಛಗೊಳಿಸಿ ಎಣ್ಣೆಯನ್ನು ಹಚ್ಚುತ್ತಾರೆ. ತೇರಿಗೆ ಅಲಂಕಾರದ ದೃಷ್ಟಿಯಿಂದ ಕಬ್ಬು, ಬಾಳೆದಿಂಡು, ತೆಂಗಿನ ಗರಿಗಳು, ಮಾವಿನ ಎಲೆ, ತಳಿರು, ತೋರಣ, ಹೂಮಾಲೆಗಳನ್ನು ಕಟ್ಟಿ, ಬಣ್ಣ ಬಣ್ಣದ ಪೇಪರುಗಳನ್ನು ಹಚ್ಚಿ ತೇರಿನ ಮಧ್ಯಭಾಗಕ್ಕೆ ಅಲಂಕಾರವನ್ನು ಮಾಡಿದರೆ, ತೇರಿನ ತುದಿದು ಭಾಗದಲ್ಲಿ ಅನೇಕ ರೀತಿಯ ಬಣ್ಣದ ಬಟ್ಟೆಗಳ ಜಾಲರಿಗಳನ್ನು ಗೋಲಾಕಾರವಾಗಿ ಕಟ್ಟುತ್ತಾರೆ. ಲಚ್ಯಾಣದ ಸಿದ್ಧಲಿಂಗ ಸ್ವಾಮಿಗಳ ಬಂಗಾರದ ಕಳಸವನ್ನು ತಂದು ತೇರಿಗೆ ಏರಿಸುವುದು ವಿಶಿಷ್ಟ ಪದ್ಧತಿಯಾಗಿದೆ.

ಬಹುತೇಕ ತೇರುಗಳಿಗೆ ಒಂದೇ ಕಳಸವಿದ್ದರೆ, ಚಡಚಣದ ಸಂಗಮೇಶ್ವರ ರಥಕ್ಕೆ ಭಕ್ತರು ಕಾಣಿಕೆ ಕೊಟ್ಟ ಒಂಬತ್ತು ಕಳಸವನ್ನು ತೇರಿಗೆ ಅಲಂಕರಿಸಿರುತ್ತಾರೆ. ಮತ್ತು ಗೋಲಗೇರಿ (ತಾ ಸಿಂದಗಿ) ಗೊಲ್ಲಾಳೇಶ್ವರ (ಹಾಲುಮತದ ದೇವಸ್ಥಾನ) ಜಾತ್ರೆಯಲ್ಲಿ ತೇರಿನ ಮೇಲೆ ಕಳಸವಿಟ್ಟು ಅದರ ಮೇಲೆ ದೊಡ್ಡದಾದ ಛತ್ರಿಯು ಕಂಡುಬರುತ್ತದೆ. ಇದಕ್ಕೆ ಭೂಚಕ್ರದ ಛತ್ರಿ ಎಂತಲೂ ಕರೆಯುತ್ತಾರೆ.

ನಂತರ ಗೋಳಸಾರದಿ ಭಾಗಮ್ಮತಾಯಿ ರಥ, ರೋಡಗಿ ವಿರಕ್ತಮಠದ ರಥ, ಖೇಡಗಿ, ಸಂಗೋಗಿ, ಹಿರೇರೂಗಿ, ತಾಂಬಾ, ಈ ಎಲ್ಲಾ ರಥೋತ್ಸವಗಳು ಜಾತ್ರೆಗಳ ಸಮಯದಲ್ಲಿ ವಿಜೃಂಭಣೆಯಿಂದ ಮೆರವಣಿಗೆಯನ್ನು ನಡೆಸಲಾಗುತ್ತದೆ.

ಹೀಗೆ ತೇರನ್ನು ಎಳೆಯುವಾಗ ಜೈ ಜೈಕಾರ ಮಾಡುತ್ತಾ ಆ ದೇವರ ಹೆಸರಿನಲ್ಲಿ ''ಮಾತಾ ಭಾಗಮ್ಮ ತಾಯೀಕೀ ಜೈ'' ''ಸಿದ್ಧಲಿಂಗ ಮಹಾರಾಜ ಕೀ ಜೈ'' ಕೊಲ್ಹಾರ ಗ್ರಾಮದಲ್ಲಿ ''ಹರಿವ ಹಾವಿನ ಗಂಡ ಉರಿವ ಕಿಚ್ಚಿನ ಗಂಡ ಮೂರು ಲೋಕದ ಗಂಡ ಪುಂಡ ಪಾಶ್ಯಾಕಿ ದೋಸ್ತರಾ ಹೋದಿನ್ ವೀರಭದ್ರ ಕೀ ಜೈ ಎಂಬ

ಘೋಷಣೆಯು ಭಕ್ತರಲ್ಲಿ ತೇರನ್ನು ಎಳೆಯುವಂತೆ ಪ್ರೇರಣೆಯನ್ನು ನೀಡುತ್ತದೆ. ತೇರನ್ನು ಎಳೆಯುವಾಗ ಭಕ್ತರು ಬೇಡಿಕೊಂಡ ಹರಕೆಯನ್ನು ತೋರಿಸಲು ಬಾಳೇಕಾಯಿ ಉತ್ತತ್ತಿ ಕಬ್ಬಿನ ಗಣಿಕೆ ಚುರುಮುರಿ ಹಾರಿಸುತ್ತಾರೆ.

ಮನಗೂಳಿ ಬಸವಣ್ಣನ ರಥೋತ್ಸವದಲ್ಲಿ ತೇರಿನ ಮೇಲಿನಿಂದ ಕೂಸುಗಳನ್ನು ಆರೋಗ್ಯ ಆಯುಷ್ಯಗಳು ವೃದ್ಧಿಸುತ್ತವೆಯೆಂಬ ನಂಬಿಕೆಯಿಂದ ಹಾರಿಸುತ್ತಾರೆ. ನಂತರ ರಥವನ್ನು ಪಾದಗಟ್ಟಿಗೆ ಮುಟ್ಟಿಸಿ ಮರಳಿ ಗುಡಿಯ ಹತ್ತಿರ ತಂದು ನಿಲ್ಲಿಸುತ್ತಾರೆ.

ಒಮ್ಮೆ ಗೊಲಗೇರಿ ಗೊಲ್ಲಾಳೇಶ್ವರನ ರಥವು ಪಾದಗಟ್ಟಿಯಿಂದ ಎಷ್ಟು ಜಗ್ಗಿದರೂ ಇದ್ದ ಸ್ಥಳದಲ್ಲೇ ನಿಂತಿತು. ಈ ದೇವರ ಮನೆಯವರು ಇವರು ಕೂಡಾ ತಮ್ಮ ಮನೆಗೆ ಹೋಗದೇ ತೇರಿನ ಹತ್ತಿರವೇ ಸ್ನಾನ, ಪೂಜೆ, ಮಾಡುತ್ತಾ ಬೆಲ್ಲದ ನೀರಿನ ಪಾನಕವನ್ನು ಕುಡಿಯುತ್ತಾ ಉಪವಾಸ ಮಾಡುವರು. ಹಲವು ದಿನಗಳಾದ ಬಳಿಕ ತೇರು ಮರಳಿ ತನ್ನ ಜಾಗಕ್ಕೆ ಬಂದ ನಂತರ ಉಪವಾಸ ವ್ರತವನ್ನು ಬಿಡುವರು.

ಜನಪದರು ಅಥವಾ ಹಾಲುಮತಸ್ಥರು ರಥೋತ್ಸವವು ರಭಸವಾಗಿ ಸಾಗಿರುವುದರ ಮೇಲೆ ಮಳೆ, ಬೆಳೆ ಭವಿಷ್ಯವನ್ನು ಗುರ್ತಿಸಿಕೊಳ್ಳುತ್ತಾರೆ. ಮತ್ತು ಮದುವೆಯಾದವರು ತೆರನ್ನು ಎಳೆದರೆ ಬೇಗ ಸಂತಾನ ಪ್ರಾಪ್ತಿಯಾಗುತ್ತದೆಯೆಂದು ಮತ್ತು ತೇರು ಎಡಕ್ಕೆ ಸಾಗಿದರೆ ಅಶುಭ ಮತ್ತು ಬಲಕ್ಕೆ ಸಾಗಿದರೆ ಶುಭ ಎಂಬ ನಂಬಿಕೆಯನ್ನು ಗ್ರಾಮಸ್ಥರು ನಂಬಿಕೊಂಡುಬಂದಿದ್ದಾರೆ.

### ೪.೩. ಅಗ್ಗಿ ಹಾಯುವುದು

ಜನಪದರು ಭಕ್ತಿ ಶ್ರದ್ಧೆ, ಹರಕೆಯ ರೂಪದಲ್ಲಿ ಆಚರಿಸುವ ಒಂದು ವಿಶಿಷ್ಟ ಪದ್ಧತಿಯಾಗಿದೆ ಅಗ್ನಿಹಾಯುವುದು. ಇದನ್ನು ಅಯಾಗ್ರಾಮಗಳ ಜಾತ್ರೆಗಳಲ್ಲಿ ರಥೋತ್ಸವ ಜರುಗುವುದಕ್ಕಿಂತ ಮುಂಚೆ ಆಚರಿಸುತ್ತಾರೆ. ವಿಶೇಷವಾಗಿ ಇದನ್ನು ವೀರಭದ್ರ, ಮುಸ್ಲಿಂ ದೇವರನ್ನು ಹಿಂದು ಭಕ್ತರು ಪೂಜಿಸುತ್ತಿದ್ದಂತಹ ಗ್ರಾಮಗಳಲ್ಲಿ ಮತ್ತು ದಲಿತ ದೇವತೆಗಳಲ್ಲಿ ಕಂಡುಬರುತ್ತದೆ.

### ಸಿದ್ಧತೆ ಮತ್ತು ಆಚರಣೆ:

ಆಯಾಗ್ರಾಮಗಳ ದೇವರುಗಳ ಮುಂದೆ ನಾಲ್ಕು ಐದು ಅಡಿ ಆಳದ ಮತ್ತು ನಾಲ್ಕಾರು ಅಡಿ ಉದ್ದದ ಗುಂಡಿಯನ್ನು ತೋಡಿರುತ್ತಾರೆ. ಆ ಕೊಂಡದ ಸುತ್ತಲೂ ನೀರನ್ನು ಸಿಂಪಡಿಸಿ, ಧೂಳು ಹಾರದಂತೆ ಮಾಡಿ ಶಗಣಿಯಿಂದ ಸಾರಿಸಿ, ರಂಗೋಲಿ ಹಾಕಿ, ನಾಲ್ಕೂ ಮೂಲೆಗಳಿಗೆ ಕಂಬವನ್ನುಕಟ್ಟಿ ಅದಕ್ಕೆ ತೋರಣಗಳಿಂದ ಶೃಂಗಾರ ಮಾಡುತ್ತಾರೆ. ನಂತರ ಗ್ರಾಮದ ಜನರು ಕಟ್ಟಿಗಗಳನ್ನು ಅದರಲ್ಲಿ ಹಾಕಿ ಅಗ್ನಿಸ್ಪರ್ಶ ಮಾಡಿ ಎಲ್ಲಾ ಸೌದೆಗಳು ಕೆಂಡದ ರೂಪದಲ್ಲಿ ಸುಡುವತನಕ ಡೊಳ್ಳಿನ ಹಾಡುಗಳನ್ನು ಹಾಡುತ್ತಾರೆ.

''ಕೆಂಡಾದ ಮೇಲೆ ಸಹಸ್ರಾರು ಭಕ್ತರು
ಬಂಡಿಯ ತುಂಬ ಕಟ್ಟಿಗೆ | ತಾರೇ
ಎಲ್ಲರೂ ಅಗ್ನಿ ತುಳಿಯೋಣ''[೧]

ಮರುದಿನ ಮಧ್ಯಾಹ್ನದ ಹೊತ್ತಿನಲ್ಲಿ ಪಲ್ಲಕ್ಕಿ ಉತ್ಸವದ ಮುಂದೆ ಡೊಳ್ಳು, ಹಲ್ಗೆಗೆ, ಶಹನಾಯಿ, ಬಾರಿಸುತ್ತಾ ಅಗ್ನಿಕೊಂಡದ ಮುಂದೆ ನಿಂತು, ಮಡಿ ಬಟ್ಟೆಯನ್ನುಟ್ಟುಕೊಂಡು ಅಗ್ನಿಹಾಯಲು ಸಿದ್ಧವಾಗಿದ್ದವರನ್ನು ಮುತ್ತೈದೆಯರು ಆರತಿ ಬೆಳಗಿ, ಸಿಡಿಗಾಯಿ ಒಡೆದು ಅಗ್ನಿ ಹಾಯುವುದನ್ನು ಪ್ರಾರಂಭಮಾಡಲಾಗುತ್ತದೆ.

''ಅಗ್ನಿ ತುಳಿಯುವಾಗ ಇಡಗಾಯಿ ಒಡಸಣ್ಣ
ಕಾಯೊಡೆದು ಕೈಯ್ಯ ಮುಗಿರಣ್ಣ | ನನ್ನಣ್ಣ
ವೀರಭದ್ರನ ನೆನಕೊಂಡ''

ಅಗ್ನಿಹಾಯುವ ಪೂಜಾರಿಯ ಹಿಂದೆಪಲ್ಲಕ್ಕಿಯನ್ನು ಹೊತ್ತವನು ಮತ್ತು ಇವರ ಹಿಂದೆ ಹರಕೆ ಹೊತ್ತವರು ಅಗ್ಗಿಯನ್ನು ಹಾಯುತ್ತಾರೆ. ದೇವರ ಮೇಲೆ ಭಕ್ತಿಯನ್ನಿಟ್ಟು ಕೆಂಡ ತುಳಿದರೆ ಕಾಲು ಸುಡುವುದಿಲ್ಲವೆಂಬ ನಂಬಿಕೆಯಿದೆ.

ಲಾಳಸಂಗಿ, ಗೋಳಸಾರ, ಕಕ್ಕಳಮೇಲಿ ಭುಯ್ಯಾರ, ಅಂಜುಟಗಿ, ಹಿರೇರೂಗಿ, ಬಂಥನಾಳ, ಮಲಘಾಣ, ದೇವರ ನಾವದಗಿ ಅನೇಕ ಗ್ರಾಮಗಳ ಜಾತ್ರೆಗಳಲ್ಲಿ ಅಗ್ಗಿ ಹಾಯುವಾಗ ಭಾವಾವೇಶದಿಂದ ಜನರು ನೋಡುತ್ತಾ ನಿಂತಿರುತ್ತಾರೆ. ನೆಲದ ಮೇಲೆ ನಡೆದಂತೆ ಬೆಂಕಿಯ ಮೇಲೆ ನಡೆಯುವುದು ಅಷ್ಟು ಸುಲಭದ ಕೆಲಸವಲ್ಲ. ಅಗ್ಗಿ ಹಾಯುವ ಇವರು ದೇವರ ಮೇಲಿಟ್ಟಿರುವ ಭಯ, ಭಕ್ತಿ, ನಂಬಿಕೆಯಾಗಿದೆ ಮತ್ತು ಆ ದೇವರ ಘೋಷಣೆಗಳು ಇಂತಹ ಆಚರಣೆಗೆ ಪ್ರೋತ್ಸಾಹ ನೀಡಿವೆ.

ಬಿಜಾಪುರ ಜಿಲ್ಲೆಯ ಇಂಡಿ ತಾಲೂಕಿನಲ್ಲಿ ಅಗ್ಗಿ ಪುಟುವನ್ನು ಬನ್ನಿ ಕಟ್ಟಿಗೆಯಿಂದ ಕೆಂಡವನ್ನು ಸಿದ್ಧಪಡಿಸಿರುತ್ತಾರೆ. ಅಗ್ಗಿ ಹಾಯುವವನ ಪಾದಕ್ಕೆ ಅಂಟಿಕೊಂಡಿದ ಬೆಂಕಿಯ ಕೆಂಡಗಳನ್ನು ನೆರೆದ ಭಕ್ತರೆಲ್ಲಾ ಪ್ರಸಾದ ರೂಪದಲ್ಲಿ ಸ್ವೀಕರಿಸುತ್ತಾರೆ.

ಇಂಥಹ ಆಚರಣೆಗಳು ಕರ್ನಾಟಕ ರಾಜ್ಯದಲ್ಲಿ ಎಲ್ಲಾ ಕಡೆಯೂ ಕಂಡುಬರುತ್ತದೆ. ಅಷ್ಟೇ ಅಲ್ಲಾ ಮಾರಿಶಸ, ಬಲ್ಗೇರಿಯಾ, ನ್ಯೂಜಿಲ್ಯಾಂಡ, ಸ್ಪೇನ್, ಚೈನಾ, ಗ್ರೀಕ, ಈಜಿಪ್ಟ ಈಪಾಶ್ಚಾತ್ಯ ದೇಶಗಳ ಬುಡಕಟ್ಟು ಜನಾಂಗಗಳಲ್ಲಿ ಈಸಂಪ್ರದಾಯ ಕಂಡುಬರುತ್ತದೆ.[೩]

ಈ ಅಗ್ಗಿ ಹಾಯುವುದರ ಬಗ್ಗೆ ಕೆಲವು ನಿಯಮಗಳು ಈ ರೀತಿಯಲ್ಲಿವೆ.

೧. ಅಗ್ಗಿ ಹಾಯುವವರು ಉಪವಾಸವಿರಬೇಕು.

೨. 'ಕೊಬ್ರಿ' ತಿನ್ನಬಾರದು

೩. ಹೆಂಗಸರ ಸಂಪರ್ಕ ಮಾಡಬಾರದು

೪. ಅಗ್ಗಿ ಹಾಯುವವನ ಮನೆಯಲ್ಲಿ ಮಡಿ-ಮೈಲಿಗೆ ಸೂತಕ ಆಗಿರಬಾರದು

೫. ಅಗ್ಗಿ ಹಾಯುವವನು ಬಲವಾದ ಮನೋಸ್ಥೈರ್ಯ ಮತ್ತು ಧೈರ್ಯವನ್ನು ತುಂಬಿಕೊಂಡಿರಬೇಕು.

೬. ಅಗ್ಗಿ ಹಾಯುವಂತಹ ಹೆಂಗಸಾಗಲೀ ಅಥವಾ ಅಗ್ಗಿ ಹಾಯುವಂತಹವನ ಹೆಂಡತಿಯಾಗಲೀ ಬಸುರಿಯಾಗಿರಬಾರದು.

ಈ ರೀತಿಯಾಗಿ ಇಂತಹ ನಿಯಮಗಳಿಗೆ ಬದ್ಧವಾಗಿ ಆಚರಣೆಯಲ್ಲಿ ಪಾಲ್ಗೊಳ್ಳಬೇಕು. ಇಲ್ಲವಾದರೆ ಅದೇ ಬೆಂಕಿಯಲ್ಲಿ ಸುಟ್ಟು ಬೂದಿಯಾಗುವರು ಎಂಬ ನಂಬಿಕೆ ಗ್ರಾಮೀಣ ಜನಪದರಲ್ಲಿದೆ.

**೪.೪. ಅಲಗಿನ ಆಟ**

ಅಲಗ ಎಂದರೆ 'ಖಡ್ಗ' ಕೆಲವೊಂದು ಜಾತ್ರೆಗಳಲ್ಲಿ ಹಾಲುಮತದ ಪೂಜಾರಿಗಳು ಮೈಮೇಲೆ ದೇವರು ಬಂದಾಗ ಖಡ್ಗದಿಂದ ಹೊಟ್ಟೆಗೆ ಬೆನ್ನಿಗೆ ಹೀಗೆ ಶರೀರದ ಎಲ್ಲಾ ಭಾಗಗಳಲೆಲ್ಲಾ ಹಲವು ಸಾರಿ ಬಡಿದುಕೊಳ್ಳುವ ಆಟವೇ ಅಲಗಿನ ಆಟ.

ಕೈಲಾಸದಲ್ಲಿ ಅಮೋಘಸಿದ್ದನು ಪಾರ್ವತಿ ಪರಮೇಶ್ವರರ ಸೇವೆಯನ್ನು ಮಾಡುತ್ತಾ ಏಳು ಯುಗಗಳ ಕಾಲ ಸೇವೆ ಮಾಡಿರುವುದರಿಂದ ಅವನಲ್ಲಿ ನನ್ನಂಥ ಶಿಷ್ಯನೇ ಬೇರೆಯಾರೂ ಇಲ್ಲವೆಂದು ಅಮೋಘಸಿದ್ಧನಿಗೆ ಗುರುವಾಗಿರುವಂತಹ ಬೀರದೇವರ ಸೇವೆಮಾಡುತ್ತಿದ್ದ ಈಗಿನ ಇಂಡಿ ತಾಲೂಕಿನ ಶಿರಾಡೋಣದಲ್ಲಿ ಡೊಳ್ಳಿನ ಸಪ್ಪಳ, ಧೂಪದ ಆರತಿ ಸುವಾಸನೆ, ಇವುಗಳೆಲ್ಲಾ ಪಾರ್ವತಿಗೆ ಗೊತ್ತಾದಾಗ ತನ್ನ ಪತಿದೇವನಲ್ಲಿ ಭಿನ್ನವಿಸಿ ಭೂಲೋಕಕ್ಕೆ ಹೋಗಿ ಶಿಷ್ಯನಾದ ಮಾಳಪ್ಪನನ್ನು ನೋಡಿ ಬರೋಣವೆಂದು ಶಿವ ಪಾರ್ವತಿಯರು ಮಾಳಪ್ಪನನ್ನು ಪರೀಕ್ಷಿಸಲು ಭೂಮಿಗೆ ಬರುತ್ತಾರೆ.

ಶಿವ ಪಾರ್ವತಿಯರು ತಮ್ಮ ವೇಷ ಭೂಷಣವನ್ನು ಬದಲಿಸಿಕೊಂಡು ಗೊತ್ತಾಗದ ರೀತಿಯಲ್ಲಿ ಮುದುಕ ಮುದುಕಿಯರಾಗಿ 'ಸಿರಾಡೋಣ'ಗ್ರಾಮದ ಕಾತಾರಕಂಟಿಯ ಮರೆಯಲ್ಲಿ ಕುಳಿತಿರುತ್ತಾರೆ. ಶಿವನ ರೂಪ ನೋಡಿದರೆ ಮೈಯೆಲ್ಲಾ ಕೀವು ರಕ್ತದ ರಾಡಿ ಸೋರುತ್ತಿತ್ತು. ಪಕ್ಕದಲ್ಲಿ ಪಾರ್ವತಿಯು ಪತಿಯ ಸೇವೆ ಮಾಡುತ್ತಿದ್ದುದ್ದನೆಲ್ಲಾ ತ್ರಿಕಾಲ ಜ್ಞಾನಿಯಾಗಿರುವಂತಹ ಮಾಳಿಂಗರಾಯನಿಗೆ ಗೊತ್ತಾಗುತ್ತದೆ.

ಮಾಳಪ್ಪನು ನನ್ನ ಗುರುಬಂದಿದ್ದಾನೆಂದು ಧೂಪ ಆರತಿಯನ್ನು ತೆಗೆದುಕೊಂಡು ಹೋಗಿ ಶಿವನ ರೂಪವನ್ನು ನೋಡಿ ದೇಹದಿಂದ ಸೋರುವ ಕೀವು, ರಕ್ತವನ್ನು ಪಂಚಾಮೃತವನ್ನಾಗಿ ಭಾವಿಸಿ ನಾಲಿಗೆಯಿಂದ ಕುಡಿದು ಬಿಡುತ್ತಾನೆ. ಅದಕ್ಕೆ ಪಾರ್ವತಿಯು ನಿನ್ನ ಸೇವೆ ಇಷ್ಟಕ್ಕೆ ಮುಗಿಯಲಿಲ್ಲ. ನನಗೆ ಅಲಗಿನ ಆಟವನ್ನು ಆಡಿ ತೋರಸಬೇಕೆಂದಳು. ಅದಕ್ಕೆ ಮಾಳಿಂಗರಾಯನು ಒಪ್ಪಿ ಗುರು ಬೀರಣ್ಣನ ಆಶೀರ್ವಾದ ಮತ್ತು ನಿಮ್ಮೆಲ್ಲರ ಆಶೀರ್ವಾದದಿಂದ ಅಲಗಿನ ಆಟ ಆಡುತ್ತೇನೆಂದು ತನ್ನ ಎರಡೂ ಕೈಗಳಲ್ಲಿ ಕತ್ತಿಯನ್ನು ಹಿಡಿದುಕೊಂಡು ಹೊಟ್ಟೆಗೆ ಬಡಿದುಕೊಂಡಾಗ ಹೊಟ್ಟೆಯೊಳಗಿನ ಕರುಳು ಹೊರಗೆ ಬಂದು ರಕ್ತವು ಮಡುವಾಗಿ ಹರಿಯಲಾರಂಭಿಸುತ್ತದೆ. ಆಗ ಶಿವ-ಪಾರ್ವತಿಯರು ತಮ್ಮ ನಿಜವಾದ ಭಕ್ತ ಮಾಳಿಂಗರಾಯನೇ ಎಂದು ತಿಳಿದು ಇಬ್ಬರು ತಮ್ಮ ನಿಜ ಸ್ವರೂಪದೊಂದಿಗೆ ಪ್ರತ್ಯಕ್ಷರಾಗಿ ನಿನಗೇನು ವರಬೇಕು ಬೇಡು ಎಂದಾಗ ''ಬಡವರಿಗೆ ಭಾಗ್ಯ'' ಮತ್ತು ವರ್ಷಕ್ಕೊಮ್ಮೆ ನನಗೆ ನಿಮ್ಮ ದರ್ಶನ ಭಾಗ್ಯಬೇಕೆಂದು ಮಾಳಪ್ಪನು ಕೇಳುತ್ತಾನೆ. ಅಂದಿನಿಂದ ಇಂದಿನವರಿಗೆ ಪ್ರತಿ ದೀಪಾವಳಿ ಅಮಾವಾಸ್ಯೆಗೆ ಕೈಲಾಸದಿಂದ ಶಿವ ಪಾರ್ವತಿಯರು ಬಂದು ಮುಂಡಾಸು ಸುತ್ತುತ್ತಾರೆಂಬ ನಂಬಿಕೆ ಇದೆ. ಅಲಗವನ್ನು ಆಡುವುದೆಂದರೆ, ಪೂಜಾರಿಯು ಡೊಳ್ಳಿನ ನಾದಕ್ಕೆ ಇನ್ನಷ್ಟು ಜೋರಾಗಿ ಜಿಗಿ-ಜಿಗಿದು ತನ್ನ ಕೈಯಲ್ಲಿದ್ದ ಖಡ್ಗದಿಂದ ತನ್ನ ಶರೀರದ ಹಲವು ಭಾಗಗಳಿಗೆ ಚುಚ್ಚಿಕೊಂಡಿದ್ದನ್ನು ನೋಡಿದ

ಭಕ್ತರಿಗೆ ಒಂದು ತರಹ ನಡುಕವುಂಟಾಗಿ ಭಯ ಆವರಿಸುತ್ತದೆ. ಇದು ಮಾಳಪ್ಪ ಮತ್ತು ಬೀರಪ್ಪನ ವರವಿದ್ದವರಿಗೆ ಮಾತ್ರ ಸಾಧ್ಯವಿದೆ. ನಂತರ ಖಡ್ಗವನ್ನು ಬಡಿದುಕೊಡು ಸ್ಥಳಗಳಿಗೆಲ್ಲಾ ಭಂಡಾರವನ್ನು ಹಚ್ಚುವರು. ಹೀಗೆ ಹಾಲುಮತ ಜನರಿಗೆ ದೇವರು ಇದ್ದಾನೆಂಬ ಅಭಿಪ್ರಾಯವನ್ನು ಈ ಅಲಗಿನ ಆಟದಿಂದ ತಿಳಿದುಕೊಂಡಿದ್ದಾರೆ.

**೪.೫. ಸಿಡಿಯಾಡುವ ಪದ್ಧತಿ**

ಗ್ರಾಮದೇವತೆಗಳ ಜಾತ್ರೆಯಲ್ಲಿ ಫಲವಂತಿಕೆ ಆಚರಣೆಗಳಲ್ಲಿ ಸಿಡಿ ಒಂದು ಆಚರಣೆ ಮಾನವನ ರಕ್ತ ಭೂದೇವಿಗೆ ಸಮರ್ಪಣೆಯಾಗದೇ ಬೆಳೆ ಹುಲುಸಾಗುವುದಿಲ್ಲ ಎಂಬ ನಂಬಿಕೆ ಹಿನ್ನೆಲೆಯಲ್ಲಿ ಸಿಡಿಯಾಡುವ ಸಂಪ್ರದಾಯ ಬೆಳೆದು ಬಂದಿದೆ. ಈ ಪದ್ಧತಿ ಶಾಕ್ತೇಯರಿಂದ ಬಂದಂತಿದೆ.[೧] ಸಿಡಿಯಾಡುವ ಪದ್ಧತಿ, ಆಚರಣೆ ಪ್ರಾದೇಶಿಕ ಭಿನ್ನತೆಗಳಿಂದ ಕೂಡಿದ್ದು. ಆಯಾ ಗ್ರಾಮದೇವತೆಯ ಸಂತುಷ್ಟಕ್ಕಾಗಿ, ನಿಗದಿತ ಅವಧಿಯಲ್ಲಿ ನಿಯಮಾನುಸಾರವಾಗಿ ಆಚರಿಸುತ್ತಾರೆ.

ಬಿಜಾಪೂರ ಜಿಲ್ಲೆಯ ಇಂಡಿ ತಾಲೂಕಿನ ತಾಂಬಾ ಶ್ರೀ ಮಹಾಲಕ್ಷ್ಮೀಯ ದೇವಸ್ಥಾನದಲ್ಲಿ ಸಿಡಿಯಾಡುವುದು ಈಗಲೂ ಜಾರಿಯಲ್ಲಿದೆ. ಈ ಆಚರಣೆಯು ಚಂದ್ರಮಾನ ಯುಗಾದಿಯಿಂದ ಕಾರಹುಣ್ಣಿಮೆಯವರೆಗೆ ಪ್ರತಿ ಶುಕ್ರವಾರ ಅತೀ ವಿಜೃಂಭಣೆಯಿಂದ ಜರುಗುತ್ತದೆ. ಈ ಪದ್ಧತಿಯು ಬ್ರಿಟಿಷರ ಆಳ್ವಿಕೆಯಲ್ಲಿ ಸುಮಾರು ೧೯೪೧-೪೨ರಲ್ಲಿ ಸ್ಥಗಿತಗೊಳಿಸಲಾಗಿತ್ತು. ೭೦ ವರ್ಷದ ದೀರ್ಘಾವಧಿಯ ನಂತರ ದೇವಿಯು ಒಬ್ಬನ ಮೈಯಲ್ಲಿ ಅವತಾರ ರೂಪದಲ್ಲಿ ಬಂದು ಸಿಡಿ ಆಡುವುದನ್ನು ಪ್ರಾರಂಭಿಸುವಂತೆ ಸೂಚಿಸಿದಳು. ನಂತರ ೧೯೮೪-೮೫ರಲ್ಲಿ ಮತ್ತೆ ಈ ಗ್ರಾಮದಲ್ಲಿ ಸಿಡಿಯಾಡುವುದು ರೂಢಿಯಲ್ಲಿ ಬಂದಿದೆ.[೨]

**ಸಿಡಿ ಬಂಡಿಯ ಸಿದ್ಧತೆ**

ಚಂದ್ರಮಾನ ಯುಗಾದಿಯ ದಿವಸ ಬೆಳಿಗ್ಗೆ ನವಬಂಡಿಯ ಸಾಮಗ್ರಿಗಳನ್ನು ದೇವಸ್ಥಾನದಿಂದ ಹೊರಗೆ ತೆಗೆದು ಸ್ವಚ್ಛಗೊಳಿಸಿ, ಬಿಡಿಬಿಡಿಯಾಗಿದ್ದ ನೊಗ, ಈಸು, ಗಾಲಿ ಇತ್ಯಾದಿಗಳನ್ನು ಜೋಡಿಸಿ, ಸಿಡಿ ಬಂಡಿಯನ್ನು ಸಿದ್ಧಗೊಳಿಸುತ್ತಾರೆ. ಇದಕ್ಕೆ 'ನವಬಂಡೆ' ಎನ್ನುವರು. ನಂತರ ನವಬಂಡಿಯ ಮೆರವಣಿಗೆಯು ಊರಿನ ಪ್ರಮುಖ ಬೀದಿಗಳಲ್ಲಿ ಸಾಗುವಾಗ ಬಂಡಿಯ ಹಿಂದೆ ಮುತ್ತೈದೆಯರು ಆರತಿಯನ್ನು ಹಿಡಿದುಕೊಂಡು ಮಹಿಳೆಯರು ಕುಂಭ ಹೊತ್ತುಕೊಂಡು ಸಾಗುತ್ತಾರೆ. ಮೆರವಣಿಗೆಯು ಬೀದಿಗಳಿಂದ ಸಾಗಿ ಮರಳಿ ಗುಡಿಗೆ ಬರುತ್ತದೆ.

**ಬಂಡಿಯ ಅಲಂಕಾರ**

ಸಿಡಿ ಬಂಡಿಯನ್ನು ವಿಶಿಷ್ಟವಾಗಿ ಅಲಂಕಾರ ಮಾಡಲಾಗುತ್ತದೆ. ಸುಮಾರು ೪೦ ಅಡಿ ಉದ್ದವಿರುವ ಈಸಿಗೆ ಹಸಿರು ಸೀರೆಯನ್ನು ಸುತ್ತುತ್ತಾರೆ. ಬಂಡಿಯ ಎಡ ಬಲ ಬದಿಗೆ ಬಾಳೆದಿಂಡು ಕಬ್ಬು, ತೆಂಗಿನ ಗರಿಗಳನ್ನು ಮತ್ತು ಕ್ಯಾವಿ ಬಣ್ಣದ ಧ್ವಜವನ್ನು ಕಟ್ಟಿ ಶೃಂಗರಿಸುತ್ತಾರೆ. ಮೇಲಿನ ನೊಗಕ್ಕೆ ಹಸಿರು ಸೀರೆಯನ್ನು ಸುತ್ತಿ, ತೆಂಗಿನಕಾಯಿ, ಸೀರೆಗಳು, ತರಗ, ಲಿಂಬೆಹಣ್ಣಿನ ಸರ, ಮಾವಿನ ತೋರಣಗಳಿಂದ ಅಲಂಕರಿಸುತ್ತಾರೆ. ಸಿಡಿಬಂಡಿಯಲ್ಲಿ ಸಿಂಹಾಸನವಿದ್ದು ಇದರ ಕೆಳಗೆ ಹುಲಿಯ ಮೂರ್ತಿ ಇದೆ. ಈ ಸಿಂಹಾಸನದ ಮೇಲೆ

ಮಹಾಲಕ್ಷ್ಮೀಯ ಮೂರ್ತಿಯನ್ನು ಪ್ರತಿಷ್ಠಾಪಿಸುತ್ತಾರೆ. ಈ ರೀತಿ ಅಲಂಕೃತಗೊಂಡ ಬಂಡಿಯು, ಸಿಡಿಯಾಡುವ ಭಕ್ತರಿಗಾಗಿ ಸಿದ್ಧಗೊಳಿಸಲಾಗುತ್ತದೆ.

ಪ್ರತಿ ಶುಕ್ರವಾರ ನಡೆಯುವ ಈ ಆಚರಣೆ ಹಿಂದಿನ ದಿವಸ ಹರಕೆ ಹೊತ್ತ ಭಕ್ತರು ದೇವಿಗೆ ಶೃಂಗಾರ ಮಾಡುವ ಪದ್ಧತಿ ಇದೆ. ಇದರ ಹಿನ್ನೆಲೆಯಾಗಿ ಭಕ್ತರು 'ಉಡಿಕೆ' ಸಾಮಾನು 'ಸೀದಾ' ಕಡ್ಡಿಬೇಳೆ, ಬೆಲ್ಲ, ಅಕ್ಕಿ ಇತ್ಯಾದಿ ಒಣ ಪದಾರ್ಥಗಳು ಎಲ್ಲವನ್ನು ಗುಡಿಯ ಪೂಜಾರಿಗೆ ಕೊಡುತ್ತಾರೆ ಪದ್ಧತಿಯಂತೆ ಹರಕೆ ಹೊತ್ತವರು ಉಪವಾಸ ವ್ರತ ಮಾಡಬೇಕು. ಹಾಗೂ ಇವರ ಪರಿಪಾಠದವರು ಕೂಡಾ ಉಪವಾಸ ವ್ರತ ಕೈಗೊಳ್ಳುವರು. ಅಂದರೆ ಹೆಣ್ಣು ಹರಕೆ ಹೊತ್ತರೆ ಮನೆಯಲ್ಲಿ ಪತಿ, ಅಣ್ಣ ತಮ್ಮ ಅಥವಾ ತಂದೆ ಅಥವಾ ಗಂಡು ಹರಕೆ ಹೊತ್ತರೆ ಪತ್ನಿ, ಅಕ್ಕ, ತಂಗಿ ಅಥವಾ ತಾಯಿ ಈ ವ್ರತ ಕೈಕೊಳ್ಳುತ್ತಾರೆ.

ಹರಕೆ ಹೊತ್ತವರು ಆರತಿ ಹಿಡಿಯುವರು. ಪೂಜಾರಿ, ಸಿಡಿಕೊಂಡಿ ಚುಚ್ಚುವವ, ಈ ಎಲ್ಲರೂ ಮಡಿಯಿಂದ ಇರುತ್ತಾರೆ. ಹರಕೆ ಹೊತ್ತವರಲ್ಲಿ ಗಂಡೆಯಾಗಲೀ ಹೆಣ್ಣೆಯಾಗಲೀ ಹಸಿರು ರೇಷ್ಮೆಯ ಸೀರೆಯ ವಿಶಿಷ್ಟ ಉಡುಪು ಧರಿಸುವುದು ಒಂದು ವೈಶಿಷ್ಟ್ಯ. ಈ ಎಲ್ಲಾ ಸಿದ್ಧತೆಯಾದ ನಂತರ ವಾದ್ಯಗಳೊಂದಿಗೆ ಊರಿನ ಪ್ರಮುಖರು ಪೂಜಾರಿಯೊಂದಿಗೆ, ಗೌಡರ ಮನೆಗೆ ಹೋಗಿ, ಎರಡು ಅಡಿ ಎತ್ತರವಿರುವ ಬೆಳ್ಳಿಯ ಮಹಾಲಕ್ಷ್ಮೀಯ ಮೂರ್ತಿಯನ್ನು ಪಲ್ಲಕ್ಕಿಯ ಮೆರವಣಿಗೆಯೊಂದಿಗೆ ಪ್ರಮುಖರು ಸೇರಿ ವಂಶಪರಂರೆಯಾಗಿ, ಕಳಸ ತಂಬಿಗೆ ಹೊತ್ತು ಬಂದಿರುವ ಕಳಸಗಿತ್ತಿಯನ್ನು ಕರೆತರುತ್ತಾರೆ. ಕಳಸಗಿತ್ತಿಯರು ಸಹ ಹಸಿರು ಸೀರೆ, ಹಸಿರು ಬಳೆ, ಕುಬಸ, ತಲೆಗೆ ಹೂವಿನ ದಂಡೆಯಿಂದ ಶೃಂಗರಿಸಿಕೊಂಡಿರುತ್ತಾರೆ. ಇವರೆಲ್ಲರೂ ಸೇರಿ ಸಿಡಿಕೊಂಡಿ ಚುಚ್ಚುವವನನ್ನು ಕರೆತರುತ್ತಾರೆ. ಕೊಂಡಿ ಚುಚ್ಚುವವ ಮಡಿ ಪಂಚೆಯ ಮೇಲೆ ಇದ್ದು ಕೊರಳಲ್ಲಿ ಕೊಂಡಿಗಳ ಸರ, ತಲೆಯ ಮೇಲೆ ರುಮಾಲು ಸುತ್ತಿಕೊಂಡಿರುತ್ತಾನೆ. ಇದೆಲ್ಲ ಮುಗಿದ ನಂತರ ನೀರಿನಲ್ಲಿ ಮಿಂದು, ಸಿಡಿಯಾಡಲು ಸಿದ್ಧವಾಗಿ ಕುಳಿತಿರುವ ಹರಕೆಯ ಭಕ್ತರನ್ನು ಇವರೆಲ್ಲರೂ ಸೇರಿ ಗುಡಿಗೆ ಕರೆತರುತ್ತಾರೆ.

ಈ ಮೆರವಣಿಗೆ ಜೊತೆ ಹರಕೆ ಹೊತ್ತ ಭಕ್ತರು ಗುಡಿಗೆ ಬರುವ ಸಮಯದಲ್ಲಿ ತಲೆಯ ಮೇಲೆ ''ಆರತಿ'' ಹೊತ್ತುಕೊಂಡಿರುತ್ತಾರೆ. ಗುಡಿಗೆ ಬಂದನಂತರ, ಎರಡು ಸಲ ಗುಡಿಗೆ ಪ್ರದಕ್ಷಿಣೆ ಸಾಕಿದ ನಂತರ, ಅವರ ತಲೆಯ ಮೇಲಿನ ಆರತಿಯನ್ನು ಅವರ ಜೊತೆಗಿದ್ದವರು ಹೊತ್ತುಕೊಳ್ಳುತ್ತಾರೆ. ಹರಕೆ ಹೊತ್ತವರನ್ನು ಗರ್ಭಗುಡಿಯಲ್ಲಿ ಕರೆದುಕೊಂಡು ಹೋಗಿ ಹಸಿರು ರೇಷ್ಮೆ ಸೀರೆ, ಹಸಿರು ಕುಪ್ಪಸ, ಕೈಗೆ ಹಸಿರು ಬಳೆ, ತಲೆಗೆ ಹೂವಿನ ದಂಡೆ ಮೂಗಿನಲ್ಲಿ ದೇವಿಯ ಮೂಗುತಿ, ಟೊಂಕಕ್ಕೆ ಡಾಬ, ಕಾಲಿಗೆ ರುಳಿಯಿಂದ ಶೃಂಗಾರ ಮಾಡಿ. ಅರಿಷಿಣ, ಕುಂಕುಮದಿಂದ ಸಿದ್ದಮಾಡಿದ ಅಕ್ಕಿಯ ಮೇಲೆ ಆರತಿ ಇಟ್ಟು, ಗುಡಿಯ ಆವರಣದಲ್ಲಿ ವಾದ್ಯಗಳೊಂದಿಗೆ ಮೆರವಣಿಗೆ ಮಾಡುತ್ತಾ, ಗುಡಿಯ ಪೂರ್ವದಿಕ್ಕಿನಲ್ಲಿರುವ ಸಿಡಿಕಟ್ಟೆಗೆ ಕರೆತರುತ್ತಾರೆ. ಈ ಮೆರವಣಿಗೆಯು ಸಿಡಿಕಟ್ಟೆಗೆ ತಲುಪುವ ಮುಂಚೆಯೇ ಊರ ಪ್ರಮುಖರೆಲ್ಲರೂ ಸೇರಿ ಅಲಂಕಾರ ಮಾಡಿದ ಸಿಡಿಬಂಡಿಯನ್ನು ಸಿಡಿಗಟ್ಟೆಯ ಸ್ಥಳಕ್ಕೆ ತಂದು ನಿಲ್ಲಿಸುತ್ತಾರೆ. ನಂತರ ಹರಕೆ ಹೊತ್ತವರನ್ನು ಡೊಳ್ಳಿಗೆ ಹಣೆ ಹಚ್ಚಿ ಬಾಗಿನಿಲ್ಲುವಂತೆ ಸೂಚಿಸುತ್ತಾರೆ. ನಂತರ ಕೊಂಡಿ ಚುಚ್ಚವವ ಅವರ ಹೊತ್ತ ಹರಕೆಯನ್ನು ಬಹಿರಂಗವಾಗಿ ಹೇಳುವಂತೆ ಕೇಳುತ್ತಾನೆ.

ಈ ಸಂದರ್ಭದಲ್ಲಿ ಅವರು ನಿಜವಾಗಿ ಹೇಳದಿದ್ದರೆ, ಸಿಡಿಕೊಂಡಿ ಅವರ ಬೆನ್ನಿಗೆ ಚುಚ್ಚುವುದಿಲ್ಲ. ಹರಕೆಗಳು ನಾನಾ ರೀತಿಯಾಗಿರುತ್ತವೆ. ಈ ಕಾರಣದಿಂದಾಗಿ ಹರಕೆ ಹೊತ್ತವರು ಕೆಲವೊಮ್ಮೆ ಬಹಿರಂಗ ಪಡಿಸಲು ಮುಜುಗರಪಡುತ್ತಾರೆ.

೧. ನನಗೆ ಗಂಡು ಮಕ್ಕಳಾಗಬೇಕು.

೨. ನಾನು ಶ್ರೀಮಂತನಾಗಬೇಕು.

೩. ಅಕ್ಕಾಸಾಯಬೇಕು. ಅಕ್ಕನ ಗಂಡನನ್ನು ನಾನು ಮದುವೆಯಾಗಬೇಕು.

೪. ನನ್ನಲ್ಲಿರುವ ಬಹಳ ದಿನದ ಕಾಯಿಲೆ ನಿವಾರಣೆಯಾಗಬೇಕು.

೫. ಜೂಜಿನಲ್ಲಿ ನನ್ನ ಮೇಲುಗೈಯಿರಬೇಕು.

೬. ವಿದ್ಯಾಭ್ಯಾಸ ಮುಗಿಸಿದ ನಂತರ ಉನ್ನತ ಹುದ್ದೆಗೆ ಸೇರಬೇಕು.

೭. ಅಣ್ಣ-ತಮ್ಮಂದಿರು ವ್ಯಾಜ್ಯದಿಂದ (ಜಗಳ) ಮುಕ್ತರಾಗಬೇಕು.

ಜನರು ತಮ್ಮ ಹರಕೆ ಹೇಳಿದ ನಂತರ ಕೊಂಡಿ ಚುಚ್ಚುವವನು ಅವರ ಬೆನ್ನಿಗೆ ಭಂಡಾರ ಉಗ್ಗಿ ಕೊಂಡಿ ಚುಚ್ಚಿದ ನಂತರ ಸಿಡಿ ಬಂಡಿಯ ಈಸಿನ ತುದಿಯಲ್ಲಿ ನಿರ್ಮಿತವಾಗಿರುವ ಮಣೆಯ ಮೇಲೆ ನಿಲ್ಲಿಸಿ ಕಾಲಿಗೆ ಹಗ್ಗಕಟ್ಟಿ ಈ ಹಗ್ಗವನ್ನು ಮೇಲಿನ ನೊಗಕ್ಕೆ ನಾಲ್ಕೈದು ಸುತ್ತು ಹಾಕಿ. ನಂತರ ಕೆಳಗೆ ಸಿಡಿ ಬಂಡಿಗೆ ಕಟ್ಟಿದ ಮೇಲೆ ಸಿಡಿಬಂಡಿಯ ಈಸನ್ನು ಮೇಲಕ್ಕೆ ಎತ್ತಿ ಬಂಡಿಯನ್ನು ಮುಂದೆ ಎಳೆಯುತ್ತಾ ಹೋಗುತ್ತಾರೆ. ಹರಕೆ ಹೊತ್ತವರು ಮೇಲಿನಿಂದ ಉಡಚೀಲದಲ್ಲಿರುವ 'ಫಳಾರ'ವನ್ನು ಎಸೆದರೆ. ಆ ಸಂದರ್ಭದಲ್ಲಿ ನೆರೆದ ಜನ ಸ್ತೋಮ ಖಾರಿಕ, ಬಾಳೆಹಣ್ಣು, ಚುರುಮುರಿ ಇತ್ಯಾದಿಗಳನ್ನು ಭಕ್ತಿಪೂರ್ವಕವಾಗಿ ಎಸೆಯುತ್ತಾರೆ. ಮುಂದೆ ಪೂಜಾರಿ ದೇವಿಯ ಪ್ರಸಾದವನ್ನು ತೆಗೆದುಕೊಂಡು. ಲಿಂಬೆಹಣ್ಣುಗಳನ್ನು ಎಡಕ್ಕೆ ಬಲಕ್ಕೆ ಎಸೆಯುತ್ತಾ ಮೆರವಣಿಯೊಂದಿಗೆ ಬರುತ್ತಾರೆ.

ಈ ಒಂದು ರೌದ್ರಮಯವಾದಂತಹ ದೃಶ್ಯ ಹಾಗೂ ಇದರ ಹಿನ್ನೆಲೆಯಾಗಿ ಹೊತ್ತ ಹರಕೆಯನ್ನು ಈಡೇರಿದಾಗ ನೆರವೇರಿಸುವಂತಹ ಆಚರಣೆ ಜನರನ್ನು ಮೂಕವಿಸ್ಮಿತರನ್ನಾಗಿ ಮಾಡುವುದಲ್ಲದೇ, ದೇವರಲ್ಲಿ ಇನ್ನೂ ಬಲವಾದ ನಂಬಿಕೆ, ಶ್ರದ್ಧೆ ಮೂಡುವಂತೆ ಪ್ರೋತ್ಸಾಹಿಸುವುದಲ್ಲದೇ, ಈ ಆಚರಣೆ ಈಗಲೂ ಮಾಡುತ್ತಾ ಬರುವ ಹಲವಾರು ಭಕ್ತಾದಿಗಳು ಈ ಸಂದರ್ಭದಲ್ಲಿ ಕಾಣುತ್ತಾರೆ.

ಸಿಡಿಯಾಡುವುದು ಮುಗಿದ ನಂತರ ಈಸನ್ನು ಕೆಳಕ್ಕೆ ಇಳಿಸಿ, ಸಿಡಿಯಾಡುವವರನ್ನು ಗರ್ಭಗುಡಿಗೆ ಕರೆದುಕೊಂಡು ಹೋಗಿ, ಬೋರಲವಾಗಿ ಮಲಗಿಸಿ, ಮತ್ತೇ ಭಂಡಾರ ಹಚ್ಚಿ, ದೇವಿಯ ಸಮ್ಮುಖದಲ್ಲಿ ಚುಚ್ಚಿದ ಕೊಂಡಿಯನ್ನು ತೆಗೆಯುತ್ತಾರೆ. ಸಿಡಿಯಾಡಿದವರು ನಂತರ ೮-೧೦ ದಿವಸದವರೆಗೆ ಮಡಿಯಿಂದ ಇದ್ದು ಶಾಸ್ತ್ರೋಕ್ತವಾಗಿ ದೇವಿಯ ಹೆಸರಿನಲ್ಲಿ ಪೂಜೆ ಮಾಡಿ, ಭಂಡಾರವನ್ನು ಕೊಂಡಿ ಚುಚ್ಚಿದ ಗಾಯಕ್ಕೆ ಹಚ್ಚಿಕೊಳ್ಳುತ್ತಾರೆ.

## ಸಿಡಿಯ ನಿಯಮಗಳು

ಉತ್ತರ ಕರ್ನಾಟಕದಲ್ಲಿ ಈ ಪದ್ಧತಿಯು ಇಂಡಿ ತಾಲೂಕಿನ ತಾಂಬಾ ಮತ್ತು ಅಫಜಲಪೂರ ತಾಲೂಕಿನ ಘತ್ತರಗಿ ಗ್ರಾಮದಲ್ಲಿ ಜರುಗುವದು ಒಂದು ವೈಶಿಷ್ಟ ಬಹಳ ವರ್ಷಗಳಿಂದ ಆಚರಿಸುತ್ತಾ ಬಂದಿರುವ ಈ ಸಂಪ್ರದಾಯವು ಬರಬರುತ್ತಾ ಹೆಚ್ಚು ಭಕ್ತರನ್ನು ಆಕರ್ಷಿಸುವುದರಿಂದ ಆ ಗ್ರಾಮದ ಪ್ರಮುಖರಿಗೆ ಬಂದ ಭಕ್ತರನ್ನು ಕ್ರಮಬದ್ಧವಾಗಿ ಉಪಚರಿಸಲು ಆಗದ ಸಂದರ್ಭದಲ್ಲಿ ಅವರುಗಳು ಕಮೀಟಿಗಳನ್ನು ಸ್ಥಾಪಿಸಿ, ತಮ್ಮದೇ ಆದ ಕೆಲವು ನಿಯಮಗಳನ್ನು ರೂಪಿಸಿ ಅವುಳನ್ನು ಎಲ್ಲರಿಗೂ ಸಮ್ಮತವಾಗಿ ಪಾಲಿಸುವಂತೆ ಮಾಡಿದ್ದಾರೆ.

೧. ಸಿಡಿ ಆಡುವವರಿಗೆ ಜಾತಿ - ಲಿಂಗಬೇಧವಿಲ್ಲ.

೨. ಸಿಡಿ ಆಡುವವರು ಏಳು ದಿವಸ ಮುಂಚೆ ತಮ್ಮ ಹೆಸರನ್ನು ಕಮೀಟಿಯವರಲ್ಲಿ ನೊಂದಾಯಿಸಬೇಕು.

೩. ಪೂಜಾರಿಕೆಯನ್ನು ಸಿಡಿ ಚುಚ್ಚುವವರು ಗಂಡಸರು ನಿರ್ವಹಿಸಬೇಕು.

೪. ಸಿಡಿಯಾಡುವವರು ಅಂದು ಉಪವಾಸವ್ರತ ಕೈಕೊಳ್ಳಬೇಕು.

೫. ಸಿಡಿಯಾಡುವವರು ಕಡ್ಡಾಯವಾಗಿ ಒಂದು ವಾರದವರೆಗೆ ಮಡಿಯಿಂದ ಇರಬೇಕು.

೬. ಸಿಡಿಯಾಡಿದ ನಂತರ ಮಹಾಲಕ್ಷ್ಮೀದೇವಿಗೆ ಬೆನ್ನು ತೋರಿಸದೇ ಹೋಗಬೇಕು. ಒಂದು ವಾರದ ನಂತರ ಪುನಃ ಗುಡಿಗೆ ಬಂದು ಪೂಜೆ ಮಾಡಿ ನೈವೇದ್ಯ ಸಲ್ಲಿಸಿ, ದರ್ಶನ ಪಡೆದು ಬೆನ್ನು ತೋರಿಸಿ ಹೋಗಬೇಕು.

೭. ಸಿಡಿಕೊಂಡಿಯನ್ನು ಚುಚ್ಚುವಾಗ ನಿಜವನ್ನು ಹೇಳಬೇಕು. ಮತ್ತು ಬೇಡಿಕೊಂಡ ವರ ಒಳ್ಳೆಯದನ್ನೇ ಆಗಿರಬೇಕು.

ಇಂತಹ ಫಲವಂತಿಕೆಯ ಉಗ್ರ ಭಕ್ತಿಯ ಆಚರಣೆಯು ಇಂಡಿ ತಾಲೂಕಿನ ತಾಂಬಾ ಗ್ರಾಮದಲ್ಲಿ ಎಂದಿನಿಂದ ಪ್ರಾರಂಭವಾಯಿತು ಎನ್ನುವುದು ಕಷ್ಟಸಾಧ್ಯ. ಆದರೆ ನೆರೆ ತಾಲೂಕಾದ ಅಫಜಲಪೂರದ ''ಘತ್ತರಗಾ'' ಗ್ರಾಮದಲ್ಲಿ ಈ ಆಚರಣೆಯು ವಿಜಯನಗರ ಅರಸರ ಕಾಲದಿಂದ ಜಾರಿಯಲ್ಲಿದೆ ಎನ್ನುವ ಪ್ರತೀತಿ ಇದೆ. ಈ ಗ್ರಾಮದ ಆಚರಣೆಯು ಮುಂದೆ ಸಾಗಿ ತಾಂಬಾ ಗ್ರಾಮದಲ್ಲಿಯೂ ಮುಂದುವರೆಯುತ್ತಾ ಬಂದಿರಬಹುದೆಂದು ಹೇಳುವುದು ಸೂಕ್ತವಾಗಿದೆ. ಈ ಸಿಡಿಗೆ ಸಂಬಂಧಪಟ್ಟ ತ್ರಿಪದಿಯನ್ನು ಗ್ರಾಮೀಣ ಶೈಲಿಯಲ್ಲಿ ಶ್ರೀ ಗ್ಯಾನಪ್ಪ ಮಾಸ್ತರ, ಪೂಜಾರಿಯವರು ಹೀಗೆ ಹಾಡಿದ್ದಾರೆ.

ಕರ್‍ರನ ಕರಿಹುಡುಗಿ ಕರೆದರ ಬರವಲ್ಲಿ
ಹೊಳ್ಯೇರ ನೋಡ ಸಿರಿಗೆಡಿ | ನಿಮ್ಮವ್ವ
ಸಿಡಿಯಾಡಿ ನಿನ್ನ ಹಡೆದಾಳ ||

ತ್ರಿಪದಿಯಲ್ಲಿ ಹಾಡಿ ಹರಿಸಿದಂತೆ ಇಂದಿನ ಜಾಯಮಾನದಲ್ಲಿ ಹರಕೆ ಹೊತ್ತ ಭಕ್ತರಲ್ಲಿ ಬಹುಪಾಲು ಭಕ್ತರು ಮಕ್ಕಳು ಬೇಕೆಂಬ ಹರಕೆಯನ್ನು ಬೇಡುವುದು. ಇದು ಈಡೇರಿದ ನಂತರ ಆ ಮಗುವನ್ನು ಉಡಿಯಲ್ಲಿ ಕಟ್ಟಿಕೊಂಡು ಸಿಡಿಯಾಡುವ ದೃಶ್ಯವಾಗಿದೆ. ನೋಡುವಂತಹ ಭಕ್ತರಿಗೂ ಮತ್ತು ನೆರೆದಂತಹ ಜನರಿಗೂ ಆಶ್ಚರ್ಯವಾಗುವಲ್ಲಿ ಸಂದೇಹವಿಲ್ಲ.

### ೪.೬. ಪಲ್ಲಕ್ಕಿ ವೈಶಿಷ್ಟ್ಯ

ವಿಜಾಪೂರ ಜಿಲ್ಲೆಯ ಇಂಡಿ ತಾಲೂಕಿನ ಜಾತ್ರೆಗಳ ಸಂದರ್ಭದಲ್ಲಿ ಪ್ರಾರಂಭದಿಂದ ಕೊನೆಯವರೆಗೂ, ಪಲ್ಲಕ್ಕಿ ಉತ್ಸವ ಜರುಗುವುದು ಒಂದು ವಿಶಿಷ್ಟತೆಯನ್ನು ಪಡೆದಿದೆ.

ಪಲ್ಲಕ್ಕಿಯು ತೊಟ್ಟಿಲು ಆಕಾರದಲ್ಲಿ ಹೊಂದಿದ್ದು. ಇದಕ್ಕೆ ನಾಲ್ಕು ಕಿರುಕಾಲುಗಳ ಕಾಮನಬಿಲ್ಲಿನ ಆಕಾರದ ಕಟ್ಟಿಗೆಯಿಂದ ಮಾಡಿದ ಕಮಾನು ಮತ್ತು ಇದಕ್ಕೆ ಉದ್ದನೆಯ ಹಗಲು ಕಂಬ ಹೊಂದಿರುತ್ತದೆ. ಇಂತಹ ವಿಶಿಷ್ಟ ರಚನೆಗೆ ''ಪಾಲಕಿ'' ಎನ್ನುತ್ತಾರೆ. ಆಯಾ ದೇವರ ಐತಿಹಾಸಿಕ ಹಿನ್ನೆಲೆ ಆಧಾರದ ಮೇಲೆ ಪಲ್ಲಕ್ಕಿಯು ತೊಟ್ಟಿಲದ ಮೇಲೆ ಕೆತ್ತನೆಯ ಕೆಲಸವನ್ನು ಮಾಡಿರುತ್ತಾರೆ. ಮತ್ತು ಇದಕ್ಕೆ ಮುತ್ತು, ರತ್ನ, ಮುತ್ತಿನ ಸರ, ಇವುಗಳಿಂದ ಅಲಂಕಾರವನ್ನು ಮಾಡಿ ಪಲ್ಲಕ್ಕಿಗೆ ಕುತನಿಬಟ್ಟೆ (ಮಿಂಚುವ ಬಣ್ಣ)ಯಿಂದ ಹೊದಿಸಿ, ಪಲ್ಲಕ್ಕಿಯ ಮೇಲೊಂದು ಚಿಕ್ಕ ಕಳಸವನ್ನು ಇಟ್ಟಿರುತ್ತಾರೆ. ಈ ರೀತಿಯಾಗಿ ಅಲಂಕರಿಸಿದ ಪಲ್ಲಕ್ಕಿಯಲ್ಲಿ ದೇವರ ಉತ್ಸವ ಮೂರ್ತಿಯನ್ನಿಟ್ಟು ಮೆರವಣಿಗೆಯನ್ನು ಮಾಡುತ್ತಾರೆ. ಈ ಸಂದರ್ಭದಲ್ಲಿ ಪಲ್ಲಕ್ಕಿಯ ಮುಂದೆ, ವಾದ್ಯ ಮೇಳದವರು ಡೊಳ್ಳನ್ನು ಬಾರಿಸುವವರು. ಛತ್ರಿ ಚಾಮರವನ್ನು ಹಿಡಿದವರು ಮತ್ತು ಪಲ್ಲಕ್ಕಿಯ ಹಿಂದೆ ಆರತಿಯನ್ನು ಹಿಡಿದ ಮುತ್ತೈದೆಯರಿರುತ್ತಾರೆ. ಈ ಮೆರವಣಿಗೆಯು ಪ್ರಮುಖ ಓಣಿಯಲ್ಲಿ ಸಾಗುತ್ತಿರುವಾಗ ಅವರವರ ಮನೆಯ ಮುಂದೆ ಭಕ್ತರು ತುಂಬಿದ ಕೊಡಗಳಿಂದ ಪಲ್ಲಕ್ಕಿಯನ್ನು ಹೊತ್ತ ಪೂಜಾರಿಯ ಪಾದಗಳಿಗೆ ನೀರನ್ನು ಸುರಿದು. ನೈವೇದ್ಯವನ್ನು ಸಲ್ಲಿಸಿ, ಅವರ ಪಾದಕ್ಕೆ ನಮಸ್ಕರಿಸಿ, ಆಶೀರ್ವಾದವನ್ನು ಪಡೆಯುತ್ತಾರೆ.

ಈ ಮೆರವಣಿಗೆಯು ಗ್ರಾಮದಲ್ಲಿರುವಂತಹ ಹಲವಾರು ಮನೆಗಳಿಗೆಲ್ಲಾ ಸಂಚರಿಸಿ, ಮರಳಿ ತನ್ನ ದೇವಾಲಯಕ್ಕೆ ಬಂದು. ದೇವಾಲಯವನ್ನು ಪ್ರದಕ್ಷಿಣೆ ಹಾಕಿದ ನಂತರ ತೇರಿನ ಸ್ಥಳಕ್ಕೆ ಬರುವುದಕ್ಕೆ ಮುಂಚೆ, ತೇರನ್ನು ಅಲಂಕರಿಸಿರುತ್ತಾರೆ. ಅಲ್ಲಿಗೆ ಬಂದ ಪಲ್ಲಕ್ಕಿಯು ತೇರನ್ನು ಐದು ಬಾರಿ ಹಿಂದೆ ಇರುವಂತಹ ಕಳಸವನ್ನು ಹೊತ್ತುಕೊಂಡವರ ಸಮೇತ ಸುತ್ತಿದ ನಂತರ ಪಲ್ಲಕ್ಕಿ ಮುಂದೆ ಮುಂದೆ ಸಾಗಿದಂತೆಲ್ಲಾ ಇದರ ಹಿಂದೆ ತೇರನ್ನು ಎಳೆಯುತ್ತಾರೆ. ಈ ರೀತಿಯಾಗಿ ಪಲ್ಲಕ್ಕಿಯು ಜಾತ್ರೆಗಳ ಕಾಲದಲ್ಲಿ ಒಂದು ಪ್ರಮುಖವಾದ ವಿಶೇಷತೆಯನ್ನು ಹೊಂದಿದೆ. ಕೊನೆಗೆ ಜಾತ್ರೆಯಲ್ಲಾ ಮುಗಿದ ನಂತರ ಪಲ್ಲಕ್ಕಿಯನ್ನು ದೇವಸ್ಥಾನದ ಪಡಸಾಲೆಯಲ್ಲಿ ಬಿಚ್ಚಿ ಇಡುತ್ತಾರೆ.

### ೪.೭. ಕಂಬಳಿಯ ಪೌರಾಣಿಕತೆ

ಕೃತ ಅಥವಾ ಸತ್ಯಯುಗದ ಮಾನವ ವಂಶದ ಇತಿಹಾಸವೇ ವೇದದ ವಿಚಾರ. ನಾಲ್ಕು ವೇದಗಳಲ್ಲಿ ಋಗ್ವೇದವು ಅತೀ ಪ್ರಾಚೀನವಾದುದು ಇದು ಸುಮಾರು ''೧೦೫೫೨'' ಶ್ಲೋಕಗಳುಳ್ಳ ಮಹಾಗ್ರಂಥವಾಗಿದೆ. ಋಗ್ವೇದದಲ್ಲಿ ವಸ್ತ್ರವಿದ್ಯೆಯ ಇತಿಹಾಸ ಬಹಳ ಕಡೆಗಳಲ್ಲಿ ಬರುತ್ತದೆ. ಮಾನವನ ಪ್ರಥಮ ಅವಶ್ಯಕತೆಗಳಲ್ಲಿ ಅನ್ನದ ಉತ್ಪಾದನಾ ನಂತರ ವಸ್ತ್ರ ವಿದ್ಯೆಯೇ ಕಂಡುಬರುತ್ತದೆ.

ವಸ್ತ್ರ ವಿದ್ಯೆಯು ವೇದದಲ್ಲಿ ಹೇಳಲ್ಪಟ್ಟಿರುವಂತೆಯೇ ಬ್ರಹ್ಮ ಸೂತ್ರ, ಕಾರ್ಪಸ ಸೂತ್ರಗಳಲ್ಲಿ ಹೇಳಲ್ಪಟ್ಟಿದೆ. ತತ್ವವಾಯು, ತಂತುವಾಯುಗಳಲ್ಲಿ ತತ್ವವಾಯು (ಜ್ಞಾನಿ) ಹೇಗೆ ಆತ್ಮಕ್ಕೆ ರಕ್ಷಣೆ ಕೊಡುವನೋ ಹಾಗೇ ನೇಕಾರನು

ಎಂದರೆ ತಂತುವಾಯುವನು ದೇಹಕ್ಕೆ ರಕ್ಷಣೆ ಕೊಡುವನು. ತತ್ವವಾಯು ಮತ್ತು ತಂತುವಾಯುಗಳಿಗೆ ಮಹತ್ವದ ಅರ್ಥವಿದ್ದು ವಿಚಾರ ಸಮುದ್ರವೇ ಅಡಗಿದೆ. ಮಹಾವಿಷ್ಣುವನ್ನು ''ಸುತಂತು'' ಎಂದು ಕರೆಯಲಾಗುತ್ತದೆ. ಅಲ್ಲದೇ ತಂತು ವರ್ಧನನೆಂದೂ ಸಂಭೋಧಿಸಲಾಗಿದೆ. ಭಗವಾನ್ ಶ್ರೀಕೃಷ್ಣನು ವಸುದೇವನ ಮಗನು. ವಸುದೇವನು ವೃಷ್ಣವಂಶದವನು. ವೃಷ್ಣ ಎಂದರೆ ''ಕುರಿ'' ಎಂದರ್ಥ. ಉಣ್ಣೆ ಉತ್ಪಾದನೆಯು ಕುರಿಯಿಂದಲೇ ಆಗಿರುವುದರಿಂದ ಮೇಲೆ ಹೇಳಿದಂತೆ ಕಂಬಳಿ ನೇಯುವ ಕಲೆಯು ವೇದೋಕ್ತವಾದುದು. ''ಕಂಬಲ'' ಶಬ್ದವು ಋಗ್ವೇದದಲ್ಲಿ ಮಾತ್ರವಲ್ಲದೆ ಅಥರ್ವಣ ವೇದದಲ್ಲಿಯೂ ಬರುತ್ತದೆ. ವೇದಕಾಲದಿಂದಲೂ ಕುರುಬರು ಕಂಬಳಿ ನೇಯ್ದು ಮಾರಾಟ ಮಾಡಿ ಜೀವನೋಪಾಯ ಮಾಡುವರು. ಅವರು ಅಪರೂಪಕ್ಕೆ ಇದರೊಂದಿಗೆ ವ್ಯವಸಾಯ ಮಾಡಿದರೂ ಇವರಿಗೆ ''ಕಂಬಳ ಕುರುಬರು'' ಎಂಬ ಹೆಸರು ಉಳಿದು ಬಂದಿದೆ.

ಈ ಕಂಬಳಿಯ ಕುರಿತು ಪೌರಾಣಿಕ ಕತೆಯೂ ಹೀಗೆ ಕಂಡುಬರುತ್ತದೆ. ಕೈಲಾಸದಲ್ಲಿ ದೇವಾನುದೇವತೆಗಳೆಲ್ಲರೂ ಕೂಡಿ ಉಣ್ಣೆಯನ್ನು ಹಿಂಜುತ್ತಿದ್ದರು. ಮತ್ತೆ ಕೆಲವರು ಬಿಂಗರಿಗಳಿಂದ ನೂಲು ತೆಗೆಯುತ್ತಿದ್ದರು. ವಿಶ್ವಕರ್ಮನ ಶಕ್ತಿಯಿಂದ ಕೈಮಗ್ಗಗಳು ಸಿದ್ಧಗೊಂಡವು ಮತ್ತು ನಂದಿಯು ಮಗ್ಗದ ತಗ್ಗುಗಳನ್ನು ತೋಡಿದನು. ಕೌರವರು ಮಗ್ಗಗಳನ್ನು ಸ್ಥಾಪಿಸಿದರು. ಅನಂತರದಲ್ಲಿ ಅವರೆಲ್ಲರೂ ಕೂಡಿ ಶಿವನನ್ನು ಒತ್ತಾಯ ಮಾಡಿ ಆ ಮಗ್ಗದಲ್ಲಿ ಕೂಡಿಸಿ, ವಿಷ್ಣು ಮತ್ತು ಬ್ರಹ್ಮರು ಲಾಳವನ್ನು ಒಗೆದರು. ಹೀಗೆ ವಿಶ್ವವನ್ನು ನಿರ್ಮಿಸಿದ ಶಿವನು ತನ್ನ ಸರ್ವಸಕ್ತ ಹಸ್ತಗಳಿಂದ ವಿಶ್ವದ ಪ್ರಥಮ ಕಂಬಳಿಯನ್ನು ನೇಯ್ದು ಪ್ರಥಮ ಕಂಬಳಿಕಾರನಾದನು. ಸತ್ಯ, ಶಾಂತಿ, ಪ್ರಿಯವಾದ ಕುರಿಯು ಜೀವಂತ ಇರುವಾಗಲೇ ಅದರಿಂದ ಉಣ್ಣೆಯನ್ನು ಪಡೆದು ಕಂಬಳಿ ತಯಾರಿಸಿರುವುದರಿಂದ ಇದು ಜೀವಂತ ಪೀಠ ಎನಿಸುವುದು. ಮತ್ತು ಹಿಂಸಾ ಪ್ರಾಣಿಯಾದ ಹುಲಿಯ ಮರಣದ ನಂತರ ಅದರ ಚರ್ಮ ಸುಲಿಯುವುದರಿಂದ ಅದು ಸತ್ತ ಪೀಠವಾಗುವುದು. ಹಾಗಂತಲೇ ಕಂಬಳಿ ಪೀಠಕ್ಕೆ ಮಹತ್ವವಿರುವುದು. ಎಲ್ಲ ಶುಭ ಕಾರ್ಯಗಳು ಕಂಬಳಿಯ ಮೇಲೆ ಜರುಗುವುವು.

ಇದಕ್ಕೆ ಮೈಲಿಗೆಯಿಲ್ಲ. ಇದನ್ನು ಪವಿತ್ರವೆಂದು ಭಾವಿಸಲಾಗಿದ್ದು, ಸಾಧನೆ ಗೈದವರಿಗೆ ಕಂಬಳಿ ಹೊಚ್ಚುವ ಸಂಪ್ರದಾಯ ಇಂದಿಗೂ ಮುಂದುವರೆದಿದೆ. ಆರಂಭದಿಂದಲೂ ಮಳೆ, ಚಳಿಯಿಂದ ರಕ್ಷಣೆ ನೀಡಿದ ಕಂಬಳಿಯ ಪವಾಡಗಳು ಕುರುಬರ ಮೂಲದ ಕುರುಹು ಆಗಿ ಉಳಿದಿದೆ.

ಈ ಕಂಬಳಿಯ ಬಗ್ಗೆ ಒಂದು ಪದ್ಯ ಹೀಗಿದೆ.

''ದೇವರ ಬಂದಾವ ಬನ್ನಿರೇ
ಸ್ವಾಮಿ ನಮ್ಮಯ್ಯ ಬಂದಾನ ಬನ್ನಿರೇ'' ||ಪಲ್ಲವಿ||

ಆದಿ ಸ್ಥಳದಲ್ಲಿ ಇದ್ದ ಕಂಬಳಿ
ಹಾಲುಮತ ದರಮಕ ಬಿತ್ತ ಕಂಬಳಿ
ಶಿಷ್ಯರದಿಂದ ಹುಟ್ಟಿತ ಕಂಬಳಿ
ಜಗದ ಗುರುವ ಮುಚ್ಚಿಸಿದ್ದ ಕಂಬಳಿ

ಮಳೆರಾಜ ಬಂದಾಗ ಬೆಚ್ಚಾತೊ ಕಂಬಳಿ
ತಲಿಮ್ಯಾಲ ಸುತ್ತುವ ಪಾವಡಾತ ಕಂಬಳಿ
ರಾಜ ಪಂಡಿತರಿಗೆ ಉಲನ್ ಕೋಟಾತ ಕಂಬಳಿ
ಜಾರೇಟನಂತೆ ಶೋಭಾಯ ಕಂಬಳಿ.

ಬಿತ್ತುವ ಕೂರಿಗಿ ಹಾಕುವ ಕಂಬಳಿ
ಕಣದಾಗ ರಾಶಿ ಅಳೆಯುವ ಕಂಬಳಿ
ಬಂಡಿ ರೈತಗ ಮುಂಡಿ ಮ್ಯಾಲಾಡುವ ಕಂಬಳಿ
ಬೇಕ ಬೇಕಾದಕ ಬಳಸುವ ಕಂಬಳಿ

ಬಂದ ಬೀಗರಿಗೆ ಹಾಸುವ ಕಂಬಳಿ
ಬಾಣತಿ ಮೈಯ್ಯೋ ಹೊಚ್ಚುವ ಕಂಬಳಿ
ಕೂಸಿನ ಕೈಯಾಗ ಕಡಿಯಾತ ಕಂಬಳಿ
ಜನರಿಗೆಲ್ಲಾ ಬೇಕಾದ ಸಿರಿಯ ಕಂಬಳಿ

ದಿಮ್ಮಿನ ಬುಡಕ ಹಾಸು ಕಂಬಳಿ
ಇಂಗು ಜೀರಿಗೆ ಮಾರುವ ವ್ಯಾಪಾರಿ ಕಂಬಳಿ
ಶಿಷ್ಯರಿಂದ ಹುಟ್ಟಿದ ಶುಭದ ಕಂಬಳಿ
ಸಿದ್ಧ ಮಾಳಪ್ಪನ ಒಲಿಸುವ ಕಂಬಳಿ

ಮದುವೆದು ಕಾಲಕ ತೋರುವ ಕಂಬಳಿ
ಶಾಸಕ್ಕಿ ಹೊಯುವ ಶಾಸ್ವತ ಕಂಬಳಿ
ಸತ್ಯ ಸದನದ ಹೆಚ್ಚಿನ ಕಂಬಳಿ
ಸತ್ಯ ಕುರುಬರ ಮೆಚ್ಚಿನ ಕಂಬಳಿ''

**೪.೮. ಭಂಡಾರದ ಮಹಿಮೆ**

ಹಾಲುಮತ ಸಮುದಾಯದವರೆಲ್ಲಾ ಸರ್ವ ಚೇತನ ವಾದಿಗಳು ಇವರು ಸೂರ್ಯ ಚಂದ್ರ, ಹಾಲು-ನೀರು, ಭಂಡಾರ, ದನ-ಕರು, ಗಿಡ ಮರ, ಅನೇಕ ವಸ್ತುಗಳನ್ನು ಭಕ್ತಿ ಬಾವದಿಂದ ಪೂಜಿಸುವರು. ಇವುಗಳೆಲ್ಲವು ಮಾನವನ ಬದುಕಿಗೆ ಮತ್ತು ಬೆಳವಣಿಗೆಗೆ ಸಂಜೀವಿನಿಯಾಗಿರುವುದು. ಭಂಡಾರಗಳಲ್ಲಿ ಔಷಧೀಯ ಗುಣವಿರುವುದನ್ನು ನಮ್ಮ ಪೂರ್ವಜರು ಬಹಳ ಹಿಂದೆಯೇ ಪತ್ತೆ ಹಚ್ಚಿ ಇವುಗಳಿಗೆ ದೈವದ ಸ್ವರೂಪ ನೀಡಿ ಪೂಜಿಸುತ್ತಾ ಬಂದಿದ್ದಾರೆ. ಭಂಡಾರಗಳ ಪ್ರತೀಕವೇ ಮೈಲಾರ, ಖಂಡೋಬಾ, ಬೀರಪ್ಪ, ಅಮೋಘಸಿದ್ಧ, ಮಾಳಿಂಗರಾಯ, ಹೀಗೆ ಅನೇಕ ಪುರುಷ ದೈವಗಳನ್ನು ಹುಟ್ಟು ಹಾಕಿದರು. ಇವುಗಳು ಹಾಲುಮತದವರಿಗೆ ಪವಿತ್ರವಾಗಿರತಕ್ಕಂತಹ ರಕ್ಷಣೆಯ ಕವಚಗಳಾದವು.

ಇಂತಹ ಜ್ಞಾನವನ್ನು ಉಳಿಸಿ ಬೆಳೆಸಲೆಂದೇ ಭಂಡಾರಕ್ಕೆ ಸಂಬಂಧಿಸಿದಂತೆ ಆಚರಣೆಗಳನ್ನು ಸೃಷ್ಟಿಸಿದರು. ಹಾಲುಮತದವರು ಭಂಡಾರಕ್ಕೆ ಕೊಡುವ ಮಹತ್ವವನ್ನು ಈ ದೈವಾರಾಧನೆಗಳಿಂದ ವ್ಯಕ್ತವಾಗುತ್ತದೆ.

### ೪.೯. ದಾಸೋಹ ಮತ್ತು ಅನ್ನಸಂತರ್ಪಣೆ

ಜಾತ್ರೆಗಳ ಸಮಯದಲ್ಲಿ ಆಯಾ ಊರಿನ ಪ್ರಮುಖರು ದೇಣಿಗೆ ಪಡೆಯುವುದಾಗಲೀ ಅಥವಾ ದೇವರ ಹೆಸರಿನಲ್ಲಿರುವ ಭೂಮಿ ಇತ್ಯಾದಿಗಳಿಂದಾಗಲೀ, ಇಲ್ಲವೇ ಭಕ್ತರು ಕೊಟ್ಟ ಕಾಳು ಕಡಿಯಿಂದಾಗಲೀ ಜಾತ್ರೆಗೆ ಬಂದಂತಹ ಎಲ್ಲ ಧರ್ಮದ ಭಕ್ತರಿಗೆ ಊಟ ಬಡಿಸುವುದು ಅಥವಾ ಅನ್ನಸಂತರ್ಪಣೆ ಮಾಡಿ ದೇವರ ಭಕ್ತಿಗೆ ಪಾತ್ರರಾಗುತ್ತಾರೆ. ಇಂತಹ ಸೇವೆಗೆ ''ಅನ್ನಸಂತರ್ಪಣೆ'' ಎಂದು ಕರೆಯುತ್ತಾರೆ.

ತಾಲೂಕಿನಲ್ಲಿ ಕೆಲವೊಂದು ಮಠಗಳ ಜಾತ್ರೆಯಲ್ಲಿ ದಿನಾಲೂ ಅಲ್ಲದೇ, ಜಾತ್ರೆಯ ಸಂದರ್ಭದಲ್ಲೂ ಸಹ ''ದಾಸೋಹ'' ಪದ್ಧತಿ ಇದೆ. ಸಂಗೋಗಿ ಗೋಳಸಾರ, ಲಚ್ಯ್ಯಾಣ, ಲಾಳಸಂಗಿ, ಹಿರೇರೂಗಿ ಈ ಜಾತ್ರೆಗಳಲ್ಲಿ ಐದು ದಿನ ಸಜ್ಜಕ, ಅನ್ನ, ಸಾರು, ರೊಟ್ಟಿಯ ಅನ್ನಸಂತರ್ಪಣೆ ನಡೆಯುತ್ತದೆ. ಬೋಳೆಗಾಂವ ಸಾವರಸಿದ್ಧ, ತಡಲಗಿ ಮಡ್ಡಿಸಿದ್ಧ, ಬಳ್ಳೊಳ್ಳಿ, ಬೀರದೇವರು ಈ ಜಾತ್ರೆಗಳಲ್ಲಿ ಒಂದು ದಿವಸದ ಅನ್ನಸಂತರ್ಪಣೆಯು ಸಜ್ಜಕ, ಅನ್ನ ಸಾರು, ಮಾಡಿ ಸುಮಾರು ಏಳೆಂಟು ಸಾವಿರಗಟ್ಟಲೇ ಭಕ್ತರು ಈ ಪ್ರಸಾದವನ್ನು ಪಡೆಯುತ್ತಾರೆ. ರೋಡಗಿ, ಶಿರಾಡೋಣದಲ್ಲಿ ಸಜ್ಜಕ, ಅನ್ನ, ಸಾರು ಸಂತರ್ಪಣೆಯು ಮೂರು ದಿವಸ ಜರುಗಿದರೆ, ಭೂಯ್ಯಾರದಲ್ಲಿ ಶ್ರಾವಣ ಮಾಸದಲ್ಲಿ ಜರುಗುವ ಜಾತ್ರೆಯಲ್ಲಿ ೫೦ ರಿಂದ ೬೦ ಚೀಲದ ಮಾದಲಿ ಮತ್ತು ೧೦ ರಿಂದ ೩೦ ಚೀಲ ಅಕ್ಕಿಯ ಅನ್ನ ಸಾರುಗಳ ಸಂತರ್ಪಣೆ ನಡೆಯುತ್ತದೆ.

ಹೀಗೆ ಎಲ್ಲ ದಾನಗಳಲ್ಲಿ ''ಅನ್ನದಾನ'' ಶ್ರೇಷ್ಠ ಎನ್ನುವಂತೆ ಈ ದಾಸೋಹ ಮತ್ತು ಅನ್ನಸಂತರ್ಪಣೆ ಪದ್ಧತಿಯು ಗುಡಿ ಮಠಗಳಲ್ಲಿ ಇಂದಿಗೂ ಜಾರಿಯಲ್ಲಿರುವುದು. ಇದು ಭಾವೈಕ್ಯತೆ ಮತ್ತು ಸಾಮಾಜಿಕ ಆರ್ಥಿಕ ಸಮಾನತೆಯ ಸಂಕೇತವೂ ಆಗಿದೆ. ನಮ್ಮ ಪೂರ್ವಜರು ಹಾಕಿದಂತಹ ಸಂಪ್ರದಾಯದಂತೆಯೇ ಇಂದಿಗೂ ಈ ತಾಲೂಕಿನಲ್ಲಿ ಅನ್ನಸಂತರ್ಪಣೆಯು ಆಚರಣೆಗೊಳ್ಳುತ್ತಿರುವುದರಿಂದ ಸಕಾಲಕ್ಕೆ ಮಳೆ ಬೆಳೆಯನ್ನು ಆ ದೇವರು ದಯಪಾಲಿಸುತ್ತಾನೆ ಎಂಬ ನಂಬಿಕೆಗೆ ಮತ್ತು ಆಯಾ ದೇವಾಲಯಗಳ ಹಿರಿಮೆಗೆ ನಿದರ್ಶನವಾಗಿದೆ. ಭಕ್ತರು ಒಲುಮೆಯಿಂದ ಪ್ರಸಾದವನ್ನು ಸ್ವೀಕರಿಸಿ ಧನ್ಯರಾಗುತ್ತಾರೆ.

### ೪.೧೦. ಕರಿ ಕಟ್ಟುವುದು

ಹಾಲುಮತ ಧರ್ಮದಲ್ಲಿ ಹಲವಾರು ಆಚರಣೆಗಳು ಪ್ರಾಚೀನ ಕಾಲದಿಂದಲೂ ಕಂಡುಬಂದಿದೆ. ಅನೇಕ ಆಚರಣೆಗಲು ಹಾಲು ಮತಧರ್ಮದಲ್ಲಿ ನೆರವೇರುತ್ತಾ ಬಂದಿವೆ. ಅದರಲ್ಲಿ ಹಾಲುಮತ ದೇವರ ಜಾತ್ರೆಗಳಲ್ಲಿ ಕರಿಕಟ್ಟುವ ಆಚರಣೆಯೂ ಕೂಡಾ ಒಂದು ವಿಶಿಷ್ಟವಾದ ಆಚರಣೆಯಾಗಿದೆ.

ಹಾಲುಮತ ದೇವತೆಗಳಲ್ಲಿ ಪ್ರತಿಯೊಂದು ದೇವರ ಜಾತ್ರೆಯೂ ಅತೀ ವಿಜೃಂಭಣೆಯಿಂದ ನಡೆಯುತ್ತದೆ. ಕಿಚ್ಚು (ಅಗ್ನಿ) ಹಾಯುವುದು. ಹೇಳಿಕೆ (ನುಡಿ) ಹೇಳುವುದು. ಅನೇಕ ಆಚರಣೆಗಳು ಕಂಡುಬರುತ್ತವೆ. ಅದರಲ್ಲಿಯೂ ಕರಿಕಟ್ಟುವ ಸಂಪ್ರದಾಯವು ವಿಶಿಷ್ಟ ಆಚರಣೆಯಾಗಿದೆ.

ಹೀಗೆ ಜಾತ್ರೆಯು ಪ್ರಾರಂಭವಾಗುತ್ತಿದ್ದಂತೆಯೇ ದೇವರ ಜಗುಲಿಯ ಮೇಲೆ ಕರಿದ ಪದಾರ್ಥಗಳಾದ ಕರಚಿಕಾಯಿ, ತೊರಗ, ಹಪ್ಪಳ ಇನ್ನೂ ಬಗೆ ಬಗೆಯ ಭೋಜನದ ಪದಾರ್ಥಗಳನ್ನು ಕಟ್ಟುವುದಾಗಿದೆ.

### ೪.೧೧ ಕರಿ ಹರಿಯುವುದು

ಹಾಲುಮತ ದೇವರುಗಳ ಜಾತ್ರೆಯ ಕೊನೆಯ ದಿನದಂದು ಕಟ್ಟಿದಂತಹ ಕರಿಯನ್ನು ಹರಿಯುವುದು ಇದೊಂದು ವಿಶಿಷ್ಟ ಸಂಪ್ರದಾಯವಾಗಿದೆ. ನಂತರ ಈ ಆಹಾರ ಪದಾರ್ಥಗಳನ್ನೆಲ್ಲಾ ಜಾತ್ರೆಗೆ ಬಂದಂತಹ ಡೊಳ್ಳಿನ ಮೇಳದವರಿಗೆ ಮತ್ತು ಬಂದಂತಹ ಭಕ್ತರಿಗೆ ಪ್ರಸಾದರೂಪವಾಗಿ ಕೊಡುತ್ತಾರೆ. ಇದು ಹೆಚ್ಚಾಗಿ ಹಾಲುಮತ ದೇವಸ್ಥಾನಗಳಲ್ಲಿ ಮಾತ್ರ ಕಂಡುಬರುತ್ತದೆ.

### ಕೊನೆ ಟಿಪ್ಪಣಿಗಳು

೧. ಮಲೆನಾಡು ಜಾನಪದ ಲೇ ಚೇನಹಳ್ಳಿ, ಸಿದ್ಧಲಿಂಗಪ್ಪ ಪು.೧೫೮

೨. ಜಾನಪದ ಸ್ವರೂಪ ಡಾ. ಹಾ.ಮಾ. ನಾಯಕ ಪು.೫೫

೩. ಜಾನಪದ ನಂಬಿಕೆಗಳು, ರಾ.ಗೌ. ಮತ್ತು ಎಂ.ಸಿ. ವಸಂತಕುಮಾರ ಪ್ರಸ್ತಾವನೆಯ ಪು.೮

೪. ವಿರೂಪಾಕ್ಷಗೌಡ ಕೆ. ಮತ್ತು ಕೊಟ್ರಪ್ಪ ಮೇಟಿ, ಸಂ ನಡಿಯಪ್ಪ, ನಮ್ಮ ನಾಡಿಗೆ ಪು. ೨೩

೫. ದೇವರ ಬಂದಾವ್ ಬನ್ನಿರೇ ಡಾ. ಶಿವಾನಂದ ಗುಬ್ಬಣ್ಣನವರ

೬. ಕುರುಬರ ಹೆಜ್ಜೆಗಳು : ಒಂದು ಅಧ್ಯಯನ - ಲೇ ಚಂದ್ರಕಾಂತ ಬಿಜ್ಜರಗಿ ಪು. ೩೭೯

೭. ಕುರುಬರ ಹೆಜ್ಜೆಗಳು : ಒಂದು ಅಧ್ಯಯನ - ಲೇ ಚಂದ್ರಕಾಂತ ಬಿಜ್ಜರಗಿ ಪು. ೩೮೦

೮. ಕುರುಬರ ಹೆಜ್ಜೆಗಳು : ಒಂದು ಅಧ್ಯಯನ - ಲೇ ಚಂದ್ರಕಾಂತ ಬಿಜ್ಜರಗಿ ಪು. ೩೮೧

೯. ದೈವಾರಾಧನೆ, : ಹಿ.ಚಿ. ಬೋರಲಿಂಗಯ್ಯ

೧೦. ಕ್ಷೇತ್ರ ಕಾರ್ಯದ ಮಾಹಿತಿಯ ವ್ಯಕ್ತಿಗಳು :

೧. ಗೋಳಪ್ಪ, ಹಣಮಂತ. ಪೂಜಾರಿ, ಸಾ. ಬೇನೂರ

೨. ಗೌಡಪ್ಪ ಹಣಮಂತ ಬಬಲಾದಿ, ಸಾ. ಬಳ್ಳೊಳ್ಳಿ

೩. ಬಸಪ್ಪ ಆಸಂಗಿ, ಸಾ. ಹೋರ್ತಿ

೪. ಬೀರದೇವರ ಡೊಳ್ಳಿನ ಸಂಘ ಸಾ. ಲಾಳಸಂಗಿ

೫. ಲಕ್ಷ್ಮೀದೇವಿ ಡೊಳ್ಳಿನ ಸಂಘ ಸಾ. ತಾಂಬಾ

೧೧. ಕರ್ನಾಟಕ ಜಾತ್ರೆಗಳು ಸಂ. ಸಿ.ಎಸ್. ಶಿವಕುಮಾರ ಸ್ವಾಮಿ ಪು.೭

೧೨. ಕರ್ನಾಟಕ ಜಾತ್ರೆಗಳು ಹಂಪ ನಾಗರಾಜಯ್ಯ ಪು.೨೫

೧೩. ಕರ್ನಾಟಕ ಜಾತ್ರೆಗಳು ಹಂಪ ನಾಗರಾಜಯ್ಯ ಪು.೨೫

೧೪. ಕರ್ನಾಟಕ ಜಾತ್ರೆಗಳು ಹಂಪ ನಾಗರಾಜಯ್ಯ ಪು.೨೫

೧೫. ಕನ್ನಡ ಕಸ್ತೂರಿ ಕೋಶ

೧೬. ಜಾತ್ರೆಗಳು ಕರೀಗೌಡ ಬೀಚನಹಳ್ಳಿ, ಪು.೩೦

೧೭. ಬಿಜಾಪುರ ಜಿಲ್ಲೆಯ ಜಾತ್ರೆಗಳು ಸಂ. ಡಾ.ಆರ್.ಆಯ್ ಚಪ್ಪರಬಂದ, ಪು.೯೦

೧೮. ಬಿಜಾಪುರ ಜಿಲ್ಲೆಯ ಜಾತ್ರೆಗಳು ಸಂ. ಡಾ.ಆರ್.ಆಯ್ ಚಪ್ಪರಬಂದ, ಪು.೯೬

೧೯. ಜನಪದ ಸಾಹಿತ್ಯ ಡಾ. ಅರ್ಜುನ ಗೊಳಸಂಗಿ, ಪು.೪೫೮

* * *

# ಅಧ್ಯಾಯ ಐದು

## ಸಮಾರೋಪ

ಇಂಡಿ ತಾಲೂಕಿನ ಹಾಲುಮತ ದೈವಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯ ಜೊತೆಗೆ ವರ್ತಮಾನದ ಆಚರಣೆಗೆ ಹೆಚ್ಚು ಒತ್ತುಕೊಟ್ಟು ಅಧ್ಯಯನವನ್ನು ಮಾಡಲಾಗಿದೆ. ಈ ಹಾಲುಮತ ದೈವಗಳ ಸಂಪ್ರದಾಯ, ಆಚರಣೆ ಮತ್ತು ದೈವಗಳ ಬಗೆಗಿನ ಪರಿಕಲ್ಪನೆಗಳನ್ನು ಪ್ರಾಸಂಗಿಕವಾಗಿ ಪರಿಚಯಿಸಲಾಗಿದೆ.

ಪ್ರತಿ ಹಾಲುಮತ ದೈವಗಳ ಬಗ್ಗೆ ಜನರ ಹತ್ತಿರ ಮತ್ತು ಪುರಾಣಗಳಲ್ಲಿ ಬರುವಂತಹ ಮಾಹಿತಿಯನ್ನು ದಾಖಲಿಸಿಕೊಂಡು ಅವುಗಳನ್ನು ತೌಲನಿಕ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಹಾಲುಮತ ದೈವಗಳ ಬಗೆಗಿನ ಅಧ್ಯಯನದ ಫಲಿತಾಂಶಗಳನ್ನು ಈ ಕೆಳಗಿನಂತೆ ದಾಖಲಿಸಬಹುದು.

೧. ಹಾಲುಮತ ದೈವಗಳು ಐತಿಹಾಸಿಕವಾಗಿ ಮತ್ತು ಧಾರ್ಮಿಕವಾಗಿ ಬೆಳೆದು ನಿಂತಿವೆ. ಈ ಹಾಲುಮತ ದೈವಗಳ ಬಗ್ಗೆ ಮೂಲದಲ್ಲಿ ಒಂದೇ ಅಭಿಪ್ರಾಯವಿಲ್ಲದಿದ್ದರೂ ನಂಬಿಕೆ ಮತ್ತು ಆಚರಣೆಗಳಲ್ಲಿ ಯಾವ ಭೇದ ನಮಗೆ ಕಾಣಲಿಕ್ಕೆ ಸಿಗುವುದಿಲ್ಲ.

೨ ಹಾಲುಮತ ಎನ್ನುವುದು ಕುರುಬ ಜನಾಂಗದ ದೈವಗಳ ಸಂಕೀಣ ವ್ಯವಸ್ಥೆಯಾಗಿದ್ದು, ಮೊಟ್ಟಮೊದಲು ಶಿವಪಾರ್ವತಿಯಂತಹ ದೈವಗಳನ್ನು ಹೊಂದಿದ್ದರೂ ಕಾಲ ಕ್ರಮೇಣ ಅವುಗಳೊಂದಿಗೆ ದೈವೀ ಪುರುಷರು ಸೇರ್ಪಡೆಯಾಗಿ ಹಾಲುಮತದ ದೈವಗಳಾಗಿ ಮಾರ್ಪಟ್ಟಿದ್ದಾರೆ.

೩. ಹಾಲುಮತದ ಆಚರಣೆಗೆ ಮತ್ತು ನಂಬಿಕೆಗಳು ಅತೀಯಾದ ಅಂಥ ಶ್ರದ್ಧೆ ಎನಿಸಿದರೂ ಅವುಗಳಲ್ಲಿ ವೈಜ್ಞಾನಿಕ ದೃಷ್ಟಿಕೋನವನ್ನು ಕೆಲವು ಹೊಂದಿರುವುದನ್ನು ನಾವು ಕಾಣಬಹುದಾದೆ.

೪. ಹಾಲುಮತದವರು ಆಚರಣೆಯಲ್ಲಿ ತಂದಿರುವ ಹಾಡಿಕೆ ಮೇಳಗಳು ಕೇವಲ ಹಾಲುಮತಕ್ಕೆ ಸಂಬಂಧಿಸಿದಂತೆ ಅಲ್ಲದೆ ಪುರಾಣ ಪ್ರಶ್ನೆ ಮತ್ತು ಗಂಡು ಹೆಣ್ಣು, ಹರ್ದೇಶಿ ನಾಗೇಶಿ ಎಂದೇ ಬೇರೆ ಬೇರೆ ಸ್ವರೂಪದ ಹಾಡುಗಳನ್ನು ಹಾಡುವುದನ್ನು ಕಾಣುತ್ತೇವೆ.

೫. ಹಾಲುಮತದ ವಿವರಗಳನ್ನು ಆಚರಣೆಗಳಲ್ಲಿ ತನ್ನದೇಯಾದಂತಹ ಸಾಂಸ್ಕೃತಿಕ ಸ್ವರೂಪದಲ್ಲಿ ಬದಲಾವಣೆಗಳಿಗೆ ಒಳಗಾಗುತ್ತವೆ. ಈ ಬದಲಾವಣೆಗಳನ್ನು ಇಲ್ಲಿ ಗಮನಿಸಬಹುದಾಗಿದೆ.

೬. ಈ ಹಾಲುಮತದ ಸಮಾಜದ ಹುಟ್ಟು ಬೆಳವಣಿಗೆಯ ಮೂಲವನ್ನು ಹುಡುಕಿದಲ್ಲಿ ಈ ಪವಿತ್ರವಾದ ಹಾಲುಮತ ಪುರಾಣದ ಅವಲೋಕನದಲ್ಲಿ ಕಂಡು ಬರುವುದು. ಹಾಲುಮತದವರು ಮೂಲತಃ ಶೈವರಾಗಿದ್ದರೂ ತರುವಾಯ ವೀರಶೈವರಾದುದು ತಿಳಿದುಬರುತ್ತದೆ.

ಪರಿಸರಕ್ಕೆ ತಕ್ಕಂತೆ ಹೊಂದಿಕೊಂಡು ಬೆಳೆಯುವುದು ಸಹಜವಾದುದರಿಂದ ವೈಷ್ಣವ ಪಂಥದವರಾಗಿರುವಂತಹ ವಿಜಯನಗರ ಅರಸರ ಕಾಲದಲ್ಲಿ ಬದುಕಿ ಬಾಳಿದ ಪೂಜ್ಯ ಕನಕದಾಸರು ಆ ದಾರಿಯನ್ನನುಸರಿಸಿ ಆತ್ಮ ಸಾಕ್ಷಾತ್ಕಾರ ಪಡೆದರು.

ಗಿರಿಯ ಶೃಂಗವೇರೇಲ ಬಳಸಿ ಬಂದ ದಾರಿ ಯಾವುದಾದರೇನು ದೇವನೊಬ್ಬ ನಾಮ ಹಲವು ಆ ದೇವನನ್ನು ಒಲಿಸಿಕೊಳ್ಳುವಂತಹ ಹಾದಿಗಳು ಅನೇಕ ರೀತಿಯಲ್ಲಿವೆ. ಹೀಗೆ ದಾಸ ಶ್ರೇಷ್ಠರ ಹೆಸರಿನಿಂದ ಕಾಗಿನೆಲೆ ಕನಕ ಸಂಸ್ಥಾನಮಠವು ಬದುಕಿನ ಹಡಗು ಭವ ಸಾಗರದಲ್ಲಿ ಸಾಗಲು ಈ ಸಮಾಜದ ದಿಕ್ಸೂಚಿಯಾಗಬಹುದು.

ಆಧುನಿಕ ಯುಗದಲ್ಲಿ ವಿಜ್ಞಾನ ಬೆಳವಣಿಗೆಯಾದಂತೆಲ್ಲಾ ಕಾಲಕಾಲಕ್ಕೆ ಹುಟ್ಟಿ, ಬೆಳೆದುಕೊಂಡು ಬಂದ ಬೈಲಾಟ, ಯಕ್ಷಗಾನ, ಡೊಳ್ಳಿನ ಹಾಡು, ನಾಟಕ, ಜಾನಪದ ಹಾಡು ಹೀಗೆ ಹಲವಾರು ಕಲೆಗಳು ವಿನಾಶದ ಹಾದಿ ಹಿಡಿದಿವೆ. ಅದಕ್ಕೆ ಗಾದೆ ವೇದಕ್ಕೆ ಸಮಾನ ಎನ್ನುವಂತೆ ಈ ಜಾನಪದ ಕಲೆಗಳು ಆಯಾ ಜನಾಂಗದ ಹಿರಿಯರ ಆಸ್ತಿ ಎಂದು ಹೇಳಿಕೊಳ್ಳುತ್ತಾ ಬಂದಂತ ಹಾಲುಮತ ಜನಾಂಗವು ಇವುಗಳನ್ನು ಉಳಿಸಿಕೊಳ್ಳುವಂತಹ ಪ್ರಯತ್ನ ಆಗಬೇಕಾಗಿದೆ.

ಇಲ್ಲಿ ಹೇಳಿರುವಂತಹ ಹಬ್ಬದ ಸಂಪ್ರದಾಯ, ಆಚರಣೆಗಳಲ್ಲಿ ಅನೇಕ ಜಾನಪದ ಅಂಶಗಳನ್ನು ಇಂದಿಗೂ ಗುರುತಿಸಬಹುದಾಗಿದೆ. ಎಂತಹ ಶಿಷ್ಟಪರ ಸಮಾಜದಲ್ಲಿಯೂ ಅನಾದಿ ಕಾಲದಿಂದಲೂ ಸಾಗಿ ಬಂದ ಅನೇಕ ಜನಪದ ರೂಢಿ, ವಿಧಿ ಕ್ರಿಯೆಗಳು ಒಂದಲ್ಲ ಒಂದು ಸ್ಥರದಲ್ಲಿ ಬೆರೆತು ಉಳಿದು ಬಂದಿರುವುದು ಸಹಜವಾಗಿದೆ.

ಅತೀತ ಶಕ್ತಿಯಲ್ಲಿ ನಂಬಿಕೆ ಹುಟ್ಟಿ, ಶ್ರದ್ಧೆಯಲ್ಲಿ ಗಟ್ಟಿಗೊಂಡು ಮಾನವನ ಕ್ಷೇಮ ಪಾಲನೆಯ ಕಲ್ಯಾಣ ಸಾಧನೆಯ ಪ್ರತೀಕವಾಗಿ ವ್ರತ ಆಚರಣೆಗಳ ಸಂಪ್ರದಾಯದಲ್ಲಿ ಮುಂದುವರೆದು ಒಂದು ಜಾತ್ರೆ ಪ್ರಕೃತಿಯ ಆರಾಧನೆ, ದೇವತಾ ಪೂಜೆ, ದೇವರ ಕೃಪೆ, ಮಂತ್ರ, ಮಾಟ, ಸ್ತುತಿಪಠಣ, ನೃತ್ಯ, ಭಜನೆ, ಕಾಣಿಕೆ, ಬಲಿ ಸಮರ್ಪಣೆ ಮುಂತಾದವುಗಳನ್ನೊಳಗೊಂಡ ಒಂದು ಜನಾಗದ ವಿವಿಧ ಮುಖದ ಬದುಕಿನ ಸಮಾರಾಧನೆಯಾಗಿರುವ ಹಬ್ಬ ಒಂದು ಸಂಕೀಣ ಸಾಂಸ್ಕೃತಿಕ ಘಟಕವಾಗಿದೆ.

ಸಾಮಾನ್ಯವಾಗಿ ಪ್ರತಿವರ್ಷ ಸಾಮಾಜಿಕ ಕ್ಷೇಮಕ್ಕಾಗಿ ವಿಶೇಷ ಸಂದರ್ಭದಲ್ಲಿ ಆಚರಿಸುವ ಜಾನಪದ ಸಂಗತಿಗಳ ಮತ್ತು ಸಂಪ್ರದಾಯಗಳ ಸಮ್ಮಿಶ್ರ ಜಟಿಲ ಘಟಕವೇ ಹಬ್ಬವಾಗಿರುವುದರಿಂದ ಇಂದಿಗೂ ಧಾರಾಳವಾಗಿ ಆಚರಣೆಯಲ್ಲಿರುವ ಹಬ್ಬಗಳ ಜಾನಪದ ವಿವೇಚನೆ, ವಿಶ್ಲೇಷಣೆಗಳು ಇಂದಿಗೂ ನಡೆಯಬೇಕಾಗಿರುವ ಅಗತ್ಯತೆಯನ್ನು ಮತ್ತು ಸಾಂಸ್ಕೃತಿಕ ಪರಂಪರೆಗಳ ಅನೇಕ ಪಾರ್ಶ್ವಗಳ ಹೊಸ ಅರಿವು ಮೂಡುವುದರಲ್ಲಿ ಯಾವುದೇ ಸಂದೇಹವಿಲ್ಲ.

ಒಟ್ಟಿನಲ್ಲಿ ಹಾಲುಮತ ದೈವಗಳು ಇಂಡಿ ತಾಲೂಕಿನ ಬಹುಜನ ಹಾಲುಮತದವರ ಜೊತೆಗೆ ಒಂದು ಜನಪದ ಸಂಸ್ಕೃತಿಯ ಅವಿಭಾಜ್ಯ ಮತ್ತು ಮಹತ್ವದ ಘಟಕಗಳಾಗಿ ಕೆಲಸ ನಿರ್ವಹಣೆ ಮಾಡುತ್ತಿರುವುದನ್ನು ಕಾಣಬಹುದಾಗಿದೆ. ಒಟ್ಟಿನಲ್ಲಿ ಇಂಡಿ ತಾಲೂಕಿನಲ್ಲಿರು ಹಾಲುಮತ ದೈವಗಳ ಕುರಿತ ಸ್ಥೂಲವಾದ ಅಧ್ಯಯನವನ್ನು ಈ ಸಂಪ್ರಬಂಧದ ಮೂಲಕ ಕೈಗೊಳ್ಳಲಾಗಿದೆ.

* * *

# ಅನುಬಂಧಗಳು

೧. ಡೊಳ್ಳಿನ ಹಾಡುಗಳು

೨. ಪರಾಮರ್ಶನ ಗ್ರಂಥಗಳು

೩. ವಕ್ತೃಗಳ ವಿವರಗಳು

೪. ಭಾವಚಿತ್ರಗಳು

## ೧. ಡೊಳ್ಳಿನ ಹಾಡುಗಳು

**ಅಡಪದ ೧**

ಕೈಲಾಸದಾಗ ಒಡಿ ಓಲಗಾ ಸಾಗಿತ್ತೋ ಬರದಿಂದೋ
ಲಗುಮಾಡಿ ನಡದೋ ರೇವಣಸಿದ್ಧ! ದಾರಿಯ
ಒಳಗ ದ್ವಾರಕ ಮುನಿಗಳ ಕಾಲಮ್ಯಾಲ ತುಳಿದ |

ಚಟ್ಟನೆ ಚೀರಿ ಸಿಟ್ಟಿಗಿ ಏರಿ ಮುನಿ
ಹಿಂಗ ನುಡಿದಾ | ನಿನಗ ಎಷ್ಟು ಗರ್ವ
ಆದ | ಭೂಲೋಕದಾಗ ಜನ್ಮ ತಾಳು ಎಂದು
ಕೊಟ್ಟ ಶಾಪ ಶಬ್ದ |

ನುಡಿದ ದ್ವಾರಕ ನೋಡಿ ರೇಣುಕಾ |
ನಡಗ್ಯಾನ ಗದರಿದಾ | ಮನ್ನಿಸು ಎಂದು
ತಾನು ಕೈಯ ಮುಗಿದ | ಸಿಟ್ಟು ಎಲ್ಲ ಸುಟ್ಟು
ಶಾಂತರಾಗಿರಿ ಎಂದು ಹೇಳತಾನೋ ಕರದ |

ಕೊಟ್ಟಿದ ಶಾಪ ಗಟ್ಟಿದ ಬರಪ
ಕರಗಿ ನೀರ ಆದ | ನಿಂದು ಹೆಚ್ಚಿಂದು
ಆದೋ ಬಿರುದ | ಭೂಮಿಯ
ಮ್ಯಾಲಿನ ಭಕ್ತರ ಉದ್ಧಾರ ಆಗಬೇಕೋ |

ಸಂಭ ಎದುರಿಗಿ ಗಾಬರಿಯಾಗಿ | ನಿಂತ
ದಂಗ ಬಡದ | ರೇವಣ ಹಿಡದ
ಶಿವನ ಪಾದ | ಶಾಪ ಮುಕ್ತನಾಗಿ
ಮಾಡಬೇಕೆ ಎಂದ ಪರಿಯಾಗಿ ಬೇಡಿದ್ದ

ದುಷ್ಟ ನಿಗ್ರರು ಶಿಷ್ಟ ಆಗ್ರಹ ಆಗ
ಬೇಕೋ ಈಗಿಂದ ಕರ್ಮ, ತುಂಬಿ
ತುಳಕತಾವ ಮರ್ತ್ಯದೊಳಗಿನ ಮರುಳರಿಗೆಲ್ಲ
ಮಾಡೋ ಮಂತ್ರ ಬೋಧ

ಕ್ಯಾಂವಿಯ ಕಂತಿ ಧರಿಸಿ | ರೇವಣ
ವಿಭೂತಿ ಕಮಂಡಲ ಹಿಡದ | ಪಂಚಾಕ್ಷರ
ಮಂತ್ರ ನುಡಿದ | ಗಗನ ಮಾರ್ಗದಿಂದ
ಭೂಮಿಗೆ ಬರುವುದು | ಕೇಳರಿ ಮುಂದಿ ಸಂದಾ |

ಇಂಡಿ ತಾಲೂಕಾ ಲಾಳಸಂಗಿ ಹಳ್ಳಿ
ನಾಡಿಗೆ ಪ್ರಸಿದ್ಧ | ಸಾಕ್ಷಾತ್ ನೆಲೆಸಿದ್ಧರಾಯ
ಸಿದ್ಧ | ಸುರಗಿಹಳ್ಳಿ ಚನಬಸು |

ಅಡಪದ ೨

ಕೇಳರಿ ಈಗ ಕಂದನ ಕೂಗ | ಕೂಡಿದ
ಸಭೆದಾಗ | ಮಾಡುವೆ ಸಾಗ | ಗುರುವಿನ
ಪದ್ಯಭಾಗ | ಶಿವನ ಕರುಣೆ
ಪಡೆದು ರೇವಣ | ಕೇಳ್ರಿ ಕೈಲಾಸದಾಗ |

ರುದ್ರಾಕ್ಷಿ ಸರಮಾಲಿ ಧರಿಸಿ ಕೊರಳಾಗ |
ಯಡ ಹುರಿ ಶಂಕ ಬಲಗೈಯಾಗ | ಹಿಡಿದು
ನಡದಾನ ಗಗನದ ಮಾರ್ಗ ನೋಡ್ಯಾನ
ಭವದಾಗ ಕರ್ಮದ ಕಾವಲಿ ಮೀರಿತೋ
ನೆಲಿ ಹೊಡದೊ ಹುಲಿಯ ಗುಡುಗ |

ಕೊಟ್ಲಿಯ ಪಾಕಿ ಪಟ್ಟಣದಾಗ | ಸೋಮ
ನಾಥನೆಂಬ ಜ್ಯೋತಿರ್ಲಿಂಗ | ಜಡಿ
ಮಳೆ ಸುರಿತಿತ್ತೋ ಗದ್ದರಿಸಿ ಗುಡುಗ |
ನಡಿತೋ ಭಜನಿ ಸಂಗ | ಸೋಮವಾರ
ದಿವಸ ಶ್ರಾವಣ ಮಾಸ ಮಾಡಿ ಭೂಪರಾಗ |

ಭೂಮಿ ಗದರಿದಾಗ ಬಿಟ್ಟಿತೋ ಲಿಂಗ |
ರೇವಣಸಿದ್ಧ ಬಂದನೋ ಹೊರಗ |
ಭಜನದ ಮುಂದಿಗೆ ಬಡದಿತ್ತೊ ದಂಗ |
ಹತ್ತಿ ಚಳಿ ನಡುಗ | ಸಾವಿರ ಸುರ್ಯನ
ಬೆಳಕಿನ ಕಿರಣ ಬಿತ್ತೋ ಭೂಮಿಯಮ್ಯಾಗ |

ಬೆದರಿದ ಭಕ್ತರಿಗೆ ನೋಡ್ಯಾನೋ ಆಗ |
ಹತ್ತಿರ ಕರೆದು ಹೇಳತಾನೋ ಹಿಂಗ |
ರೇವಣಸಿದ್ಧ ಅವತಾರ ನನಗ | ಜನರೀಗಿ
ಆಯಿತೋ ಹಿಗ್ಗ | ಹೂಮಳೆ ಗರಿತೋ
ಭಕ್ತಿಯ ಬೆರಿತೂ | ಬಿದ್ರೊ ಪಾದದ ಮ್ಯಾಗ |

ಕೊಲ್ಲಿ ಪಾಕಿ ಭಕ್ತರ ಬಳಗ |
ಧಾವಿಸಿ ಬಂದಾರೋ ಹೊಳೆ ಹರಿದಾಂಗ |
ಗುರುವು ತೋರ್ಯಾನೋ ಮುಕ್ತಿಯ ಮಾರ್ಗ |
ಅರಳಿದಾಗ ಮೊಗ್ಗೆ | ಸಂಚಾರ ಮಾಡುತಾ
ನಡದೋ ರೇವಣಸಿದ್ಧ ಭೂಮಂಡಲದಾಗ |

ಸರವೂರು ತೂಗು ಗುಡ್ಡದ ಮ್ಯಾಗ |
ಗುಪ್ತಾಗಿ ಇರುವುದು ಗುರುವಿನ ಜಾಗ
ತಪಸ್ಸುಗಳು ಮಾಡುವುದು ಮುಂದಿನ ಭಾಗ |
ಕೇಳರಿ ಇನ್ನೂ ಮ್ಯಾಗ | ಸುರಗಿಹಳ್ಳಿ
ಚನಬಸುನ್ನ ಕವನ ಕಂದಗ
ಹಾಕದಾಗ ಗುಡುಗ |

**ಅಡಪದ ೩**

ಮಾನವನ ಉದ್ಧಾರ ಮಾಡುವುದಕ್ಕಾಗಿ |
ಮರುತ್ಯಾಕ ಇಳಿದಾನ ಮಹಾಂತ ಯೋಗಿ |
ಮುಂಗೈಗಿ ಹಾಕ್ಯಾನ ಜೋಳಗಿ |
ಮಹಾಮಂತ್ರ ಭೋಧಿಶ್ಯಾನ ಬದಿಗಳಿಗಿ |

ಸಂಚಾರ ಮಾಡುತ ನಡೆದ ರೇವಣಸಿದ್ಧ
ಸರವಾರ ಗ್ರಾಮಕ ತಾಸಾಗಿ |
ಸುಕ್ಷೇತ್ರ ಮಾಡಬೇಕೆಂದ ಸುತ್ತ ತಿರುಗಿ |
ಧ್ಯಾನ ದೃಷ್ಟಿಯಿಂದ ನೋಡ್ಯಾನ ತೂಗಿ |

ಕೊಡಗಲ್ಲಿನ ಮ್ಯಾಲ ಗೋರ
ತಪಗಳ ಹಿಡಿದ ಗಜ ನಿಂತ
ತಲೆ ಕೆಳಗಾಗಿ | ಶಿವ ಸೋಸಿ
ನೋಡಬೇಕೆಂದ ತಪಸ್ಸಿಗಿ |
ಉರಿಕ್ಷೇತ್ರದಿಂದ ನೋಡಿ ಗುರುವಿಗೆ |

ಕೈಲಾಸದಿಂದ ಬೆಂಕಿಯ ಮಳೆ
ಬಂದು ಬಿರುಗಾಳಿ ಬಿಟ್ಟಿತೊ
ಉರಿಹೋಗಿ | ಗುರುದೇವ ಆಗಲಿಲ್ಲ
ತಪ ಭಂಗಿ | ಬೆಂಕಿ ಮಳೆಗಾಳಿ ನುಂಗ್ಯಾನ ಜಗ್ಗಿ |

ಉಗ್ಗರ ತಾಇ ಜಗಿದಾನ ಗುಡ್ಡದಾಗ |
ನೋಡು ಸುರ್ಯನ ದಿಕ್ಕಿಗೆ |
ತ್ರಿಶೂಲ ತೇವದಾನ ಸಿಟ್ಟಾಗಿ |
ಭೂಗರ್ಭ ಬಿಟ್ಟಿತೋ ಗವಿಯಾಗಿ |

ಬಹಳ ವರುಷಗಳು ತಪ ನಡಸ್ಯಾನ
ಗವಿಯಾಗ ಗುರುವ ಗುಪ್ತಾಗಿ |
ಸುದ್ದಿ ಸುಳಿವ ಹತ್ತಲಿಲ್ಲ
ಯಾರಿಗಿ | ಹಿಂಗ ಮುಂದ ಬಂದಿತೊ
ತಪ ಜರುಗಿ |

ಹಲವು ದಿನದ ಮ್ಯಾಲ ಶಾಂತಯ್ಯ
ಮತ್ತೆ ಅಲೆಯುತ್ತಾ ಬಂದಾನ ಅಲ್ಲಿಗೆ
ಏಳು ತರಹದ ಕಂಟಿಯ ನೆರಳಿಗೆ |
ಬೆನ್ನು ಹಚ್ಚಿ ಕುಂತಾನ ಬಡ್ಡಿಗೆ |

ಗುರುವಿನ ಸ್ತೋತ್ರ ಮುಟ್ಟಿತೋ |
ನೇತ್ರ ಶಾಂತಯ್ಯ ಮುತ್ತ್ಯಾನ | ಕಿವಿಗಳಿಗೆ |
ಶಬ್ದ ವೇದಿಯಾಗಿ | ನೋಡ್ಯಾನ ಹೋಗಿ |
ಭಯ ಭಕ್ತಿಯಿಂದ ಕರ ಶಿರಭಾಗಿ |

ಗುರುವ ಶಿಷ್ಯರ ಸಂದರ್ಶನ
ಆಗುವದು ಕೇಳರಿ ಈ ಗಳಿಗೆ |
ಸುರುಗಿಹಳ್ಳಿ ಚನಬಸುನ ಪರವಾಗಿ |
ಗುರು ತೋರಿದ ಮಾರ್ಗ ಬೆಳಕಾಗಿ |

ಅಡಪದ ೪

ಹರನ ಮೀರಿಸುವ ಹಕ್ಕ ಹೊಂದ್ಯಾನೋ |
ಗುರುವ ಶ್ರೇಷ್ಠವಾಗಿ ಸಾಧಕ | ಕಷ್ಟದಲ್ಲಿ|
ಕಾಯಿದು ಆಗ್ಯಾನೋ ಬೋಧಕ |
ಪವಿತ್ರ ಪಾದ ಧೂಳಿ ಪಾವನ
ಆಗುದು ಪಾಮರ ಈ ಜನ್ಮಕ |

ಅಜ್ಞಾತ ಕತ್ತಲ ಅಳಿಯುತ ಶಕ್ತಿ
ಗುರುವ ಆದಾನೋ ಶಬ್ದಕ | ಶಾಂತಯ್ಯ
ತಿಳಿದಾನ ತನ್ನ ಭಾವಕ | ಭಕ್ತಿ
ಪ್ರಧಾನವಾಗಿ ಪಾರ್ಥನೆ ಮಾಡ್ಯಾನೋ
ಹೊಂದಿ ಗುರುವಿನ ಚರಣಕ |

ಶಾಂತಯ್ಯ ಮತ್ತ್ಯಾನ ಸದ್ಭಾವ
ನೋಡಿ ಗುರುವ ಆದಾನೋ ಹರುಷಕ |
ಹಸ್ತವಿಟ್ಟು ಶಿಸ್ತು ಮಾಡ್ಯಾನೋ ಮಸ್ತಕ |
ಗುರುವ ಶಿಷ್ಯರು ಸಂಗಮ
ಆಗ್ಯಾರೋ ಭಕ್ತಿ ಬೀರಿತೋ ಬೆಳಕ

ಧರ್ಮದ ಕುರುಬರು ಹಾಲದಾನ ಮಾಡತಿದ್ರೋ
ನಿತ್ಯ | ನಿತ್ಯ ಅವರ ಕಾಯಕ |
ಭಕ್ತಿಯೊಳಗ ಹೆಜ್ಜೆ ಹಾಕ್ಯಾರೋ ಮುಂದಕ |
ಕುರುಬರಿಗೆಲ್ಲಾ ಕರೆದು ರೇವಣಸಿದ್ಧ
ಕೂಗಿ ತನ್ನ ಹಂತ್ಯಾಕ |

ದ್ವೇಷ ರಹಿತ ಬಿಮ್ಮ ಧರ್ಮ ಬೆಳಗಲೆಂದು
ಶುದ್ಧ ಹಾಲುಮತಕ | ಶಾಂತಯ್ಯಾಗ
ಹಾಕ್ಯಾನೋ ಗುರು ಪಟ್ಟಕ |
ಹಾಲುಮತಕ ನೀನು ಮೂಲ ಗುರುವ
ಆಗಿ ನೀಡೆಂದೂ ಪದೋದಕ |

ಶಾಂತಯ್ಯ ಮತ್ತೆ ಕೇಳತಾನ
ಗುರುವಿಗೆ ಮುಂದೆ ಬರುವ ಜಾತಕ |
ಸರವೂರ ಬೆಳಗಬೇಕೋ ಗುರು ಸ್ಥಾನಕ |
ಹುಟ್ಟಿದ ಕೂಸು ದಿಟ್ಟಾಗಿ ನುಡಿದರೆ
ಗಟ್ಟಿ ಬರಬೇಕೋ ಹೋಯಿಕ |

ಆಗಲಿ ಎಂದು ಆಶೀರ್ವಾದ ಮಾಡ್ಯಾನೋ
ಗುರು ಆಗ ರೇಣುಕಾ | ವಿಭೂತಿ
ಧರಿಸಬೇಕೊ ಮಾಡಿ ಜಳಕ |
ಶಾಂತಯ್ಯ ಮುತ್ತ್ಯಾಗ ಕರಿದು
ರೇವಣಸಿದ್ಧ ಕೊಟ್ಟ ಶಿವ ಧ್ವನಿ ಶಂಕ |

ರೇವಣಸಿದ್ಧರ ಸಾರ ಕೇಳಿದರ
ಮೂಡಲ ಹರಿದಂಗೋ ಕೆಂಪ ಜುಳಕ |
ಸುರ್‍ಯನ ಕಿರಣ ಏರಿ ಬಂದಾಗ ಮ್ಯಾಲಕ |
ಸುರಗಿಹಳ್ಳಿ ಚೆನ್ನಬಸುನ ಸಾಹಿತ್ಯ
ಸೂಲಗಿಲೆ ಅಳದ್ಹಂಗ ಮುತ್ತ ಮಾಣಿಕ್ಯ |

ಅಡಪದ ೫

ಎರಿಯ ಹೊಲದಾಗ ಹತ್ತಿದಂಗ
ಕರಕಿ | ಗಾಳಿಗಿ ನಿಲ್ಲುವುದಿಲ್ಲ ಕಟ್ಟಿದ ನೆರಕಿ |
ಉರುಳಿ ಬಿದ್ದಮ್ಯಾಲ ಬೆಳತಾನ
ನೀನು ಸುಳ್ಳೇ ಅಳಬೇಡಾ ಬಿಕ್ಕಿ ಬಿಕ್ಕಿ |

ನಮ್ಮ ಜೋಡಿ ಬಾಳ ಮಂದಿ ಹಾಡ್ಯಾರ ಹಾಡಕಿ |
ಸೊಕ್ಕಿಲೆ ಬಂದವರು ತಿಂದಾರೊದಕ್ಕಿ |

ಬಲ್ಲವ ಆಗಿನೆಂದು ನಿಗರ್‍ಯಾಡಿ
ಬರಬ್ಯಾಡೋ ಕೆಡವತೀವು ನಿನ್ನ ಹಿಕ್ಕಿ |

ಕದ್ದು ಹೊಲದಾಗ ಹೊಡಿಬಾರದೆ ಹಕ್ಕಿ |
ಹೊಲದಲ್ಲಿ ಮಾಡಿ ಹೋಗ್ಯಾವೋ ಕರಕಿ |
ಕರಕಿ ಮಾಡಿದ | ಕರಕಿ ಮಾಡಿದ ಮ್ಯಾಲ
ಕುಂಯಿ ಕುಂಯಿ ಮಾಡಿ ಸುಳ್ಳೆ
ಕೊಯ್ಯಬೇಡೋ ಗೊಳ್ಳ ಕಣಕಿ |

ಗಂಡಸರ ಕೂಡಾ ಹೆಣ್ಣುಮಕ್ಕಳು ಹಾಕುದಲ್ಲೆ ಗುಕ್ಕಿ |
ತಿಳಿಸಿ ಹೇಳತಿನಿ ತಿದಿರು ಜೋಕಿ | ತಿಳಿದು ತಿಳಿಯದೆ
ಮೈಮ್ಯಾಲ ಬಂದರೆ ಕಳಕೊಂಡಿ ನಿನ್ನ ಜುಮಕಿ |

ನಾ ಅಂದು ರಾವಣ ನಿಂತಾನೋ ಮಿಕ್ಕಿ |
ರಾಮನ ಕೂಡಾ ಕದನ ಮಾಡ್ಯಾನ ಕೆಣಕಿ |
ಸೊಕ್ಕಿನ ರಾವಣ ಇರಲಿಲ್ಲ
ಸುಮ್ಮ ಸತ್ತು ಹೋಯಿತೋ ಮಣ್ಣು ಮುಕ್ಕಿ |

ದ್ಯಗೊಂಡ ಹೊತ್ತನೋ ಗುರುವಿನ ಹರಕಿ |
ಮಡ್ಡಾರದೆ ತಿರುಗ್ಯಾನೋ ಹೊಡೆಯುತ ಪಿರಕಿ |
ಉರಿಮಾರಿ ದೇವರ ಉಗ್ರಾಣ ತೆರೆದು
ನೋಡ್ಯಾನೋ ಹಣಕಿ ಹಾಕಿ |

ಹೊಲದಾಗ ಹತ್ಯಾವೊ ಬೊಬ್ಬಲ ಕರಕಿ |
ದ್ಯಗೊಂಡ ಗೌಡಂದು ತಿಳಿದು ಹೋಯಿತೋ ಬಿಕ್ಕಿ |
ಖರೇ ದೇವರ ಹಬ್ಬ ಗರ್ವೀಲೇ ಮಾಡ್ಯಾನೋ ಕೂಡಿಸಿ ಪಲ್ಲಕ್ಕಿ |

ಲಾಳಸಂಗಿ ಊರಾಗ ಮಡ್ಡಿಸಿದ್ಧನ ಅಳಕಿ |
ನಾಡಮ್ಯಾಲ ಮೆರಿತಾದೊ ಮುತ್ತಾನ ಪಲ್ಲಕ್ಕಿ |
ಭೂಯ್ಯಾರ ನಾಗಣ್ಣನ ಕವನ ಕೇಳಿದರ
ವೈರಿಗಿ ಹುಟ್ಟಿತೋ ತರಕಿ |

ಖ್ಯಾಲಿ ೬

ಸುಳ್ಳೆ ಕೆದರಬ್ಯಾಡೊ ಕಾಲಾ | ನಿನಗ ಯಾರು
ಕೇಳಿಂದಿಲ್ಲ | ನಿಗರಬ್ಯಾಡೊ ನಮ್ಮ ಮ್ಯಾಲ
ಕುಂಯಿ ಅಂದ್ರ ಕೊಯಿದೇವು
ಕುಂಡಿ ತೊಗಲ್ಯ |
ಹಾಲ ಬಾವಿ ನೋಡಿ ಬಿದ್ದ್ಯೋ ಹಗಲ |
ಬಿದ್ದು ಮುರಕೊಂಡಿ ನಿನ್ನ ಹಲ್ಲ |

ಎಷ್ಟು ಹೇಳಿದರ ಕೇಳಲಿಲ್ಲ | ಅಳಕೋತ
ಕುತ್ಕೋ ಬಡಕೊಂಡ್ಕೊ ಗಲ್ಲ |
ನಾ ಅನ್ನೋದು ನಿನಗ ಮೂಲ |
ಹೆಂತವರು ಆಗಿ ಹೋದರು
ಮಣ್ಣ ಪಾಲ | ನಮ ಕೂಡಾ
ಹಾಕಬ್ಯಾಡೊ ಸವಾಲಾ | ಸೋತು
ಎತ್ತಿ ಹೋದೂ ಬಗಲಾ |
ಕುಸ್ತಿ ನಡಿಲಿನ್ನ ತೆಕ್ಕಿ ಮೇಲ |
ಬಿದ್ದು ಅಡಬೇಡೋ ನೀ ನೆಲ |
ಹೇಡಿ ಎದ್ದು ಏಳುವ ಮೇಲ |
ನಿನ್ನದು ದೂರದ ಇನ್ನು ಪಲ್ಲ |
ವನದಾಗ ವದರತ್ತಿತ್ತೂ ಕೋಗಿಲ |
ಕಾಗಿಣೆ ಚೇತನ ಆಗಲಿಲ್ಲ | ವದರಿ
ಹರಕೋತ ಗಂಟಲ | ಕಾಗಿದು
ನಡದಿತ್ತೊ ಕಾಲಾಹಲ |
ಇದು ನಡಿವಲ್ಲು ಹಿಡಿದು ಸಾಲ |
ಇದರ ಬೇಕಾಯಿತು ಬಾರಕೋಲ |
ಮುರ ಮುಂದೊ ಸಾರಾಯಿತೊ
ಇದರ ಬಾಲ | ಹೊಡಿಬೇಕೊ
ಉಚ್ಚಿ ಬೀಳಂಗ ತೊಗಲ |
ಲಾಳಸಂಗಿ ನಂದು ಹೆಸರಾಯ್ತು
ನಾಡಮ್ಯಾಲ | ಮಡ್ಡಿಸಿದ್ಧ ಗುರು
ನಮ್ಮ ಹಿಂಬಾಲ | ಭುಯ್ಯಾರ
ನಾಗಣ್ಣಂದು ಕೇಳಿ ಚಾಲಾ | ವೈರಿಗಿ
ಇಟ್ಟಿತೊ ಗಾಲಿಮೇಲ |

ಖ್ಯಾಲಿ ೭

ಮಾಡೋದು ಕಲಿಬೇಕೊ ಗುರುವಿನ ಧ್ಯಾನಾ |
ಮಾಡಿದರ ಗುರು ನಿಮಗ ಕಾಯಿತಾನೊ
ಮಾನಾ | ತಿರುಗಬ್ಯಾಡೊ ನೀನು ಹುಮ್ಮ |
ಆದಿಬಾಳ ಹೈರಾಣ | ಭಕ್ತಿಯೊಳಗ ಮುಕ್ತಿ
ಸಿಗುವದು ಬಾಳ ಮೇನ |
ಮಾಳಪ್ಪಗ ಗುರುವಾದೊ ಸಿದ್ಧ ಭೀರಣ್ಣಾ |
ಪೂಜೆ ಮಾಡತಾನೊ ಬಂದು ಪರಿಪೂರ್ಣಾ |

ಏಳೆಡೆ ಧೂಪಾರತಿ ಎತ್ತಿ ಬೆಳಗಾನೂ |
ಹೋಮದ ಹೋಗಿ ಹೊಡಿಯಿತೂ ಕೈಲಾಸತನಾ |
ಪಾರ್ವತಿ ಪರಮೇಶ್ವರ ಅಡಿ ಪಗಡಿನ |
ಗಡಗಡ ನಡುಗಿತೊ ಕೈಲಾಸ ಗಗನಾ |
ಪಾರ್ವತಿ ದೇವಿಗೆ ಬಂತು ಅನುಮಾನ
ನೋಡಿ ಬರುವೆನು ನಡಿರಿ ಅವನ ಭಕ್ತಿನಾ |
ಪಾರ್ವತಿ ತೊಟ್ಟಳೊ ಮನದಾಗ ಪಣಾ |
ನೋಡಿ ಬರುವೆನು ನಡಿರಿ ಅವನ ಭಕ್ತಿನಾ |
ಬಿಟ್ಟರೊ ಕೈಲಾಸ ರೂಪ ಮಾಡಿ ಧಾರಣಾ |
ಮರುತ್ಯಾಕ ಇಳಿದಾರೊ ಕಾಂತರ ವನಾ |
ಸಂಭನ ದೇಹಕ ಹುಟ್ಯಾವ ಹುಣ್ಣಾ |
ಸುತ್ತ ಸುಳಿಯತಾವೊ ಎಷ್ಟು ನಣಾ |
ಹುಣ್ಣಿನ ವಾಸನೆ ದುರ್ಗಂಧ ಇಟ್ಟು
ನಾರತಿತ್ತೂ ಬಾಳ ದೂರತನಾ |
ಅರುವ ಹಿಡಿದು ಓಡುತ ಬಂದೂ
ಮಾಳಣ್ಣ | ತಾಯಿ ತಂದೆ ಎಂದು
ಹಿಡಕೊಂಡೂ ಚರಣಾ | ಸೋರುವ ಕಿವ
ರಕ್ತ ನೆಕ್ಕಿನ ಹಸನಾ | ಹೊತ್ತಕೊಂಡು
ಬಯಿದಾನೊ ಗುರುವಿನ ತನಾ |
ಗುರುವಿನ ಮುಂದ ಹೋಗಲೆಂದೂ ಪ್ರಾಣಾ |
ಅಲಗ ಅಡಲಿಕ್ಕೆ ನಿಂತೋ ಮಾಳಣ್ಣಾ |
ಅಲಗ ಅಡಿ ಮಾಳಿಂಗರಾಯಾ | ಬೆಳಕ ತೋರ್‍ಯಾನಾ |
ಬೆನ್ನಿಲೆ ಬಿದ್ದಿತೊ ಸೂರ್ಯನ ಕಿರಣಾ |
ಪಾರ್ವತಿಗೆ ಬಂದಿತೊ ಅಂತರ ಕರುಣಾ |
ತೆರೆದು ನೋಡೋ ದೈವ ಮುಚ್ಚಿದ ಕಣ್ಣಾ |
ಭಕ್ತಿಗಿ ಮೆಚ್ಚ ಅಂದೋ ಮುಕ್ಕಣ್ಣಾ |
ಏನು ಬೇಡತಿ ಬೇಡೂ ಕುಡತಿನಿ ಇನ್ನಾ |
ಕೈಮ್ಯಾಗ ಕೈಹಾಕಿ ತೊಗೊಂಡಾನೋ ವಚನಾ |
ಮುಂಡಾಸ ತೆರಬೇಕೋ ದೀವಳಿಗೆ ದಿನಾ |
ಅಗಲಿ ಎಂದು ಕೊಟ್ಟಾನೋ ವಚನಾ |
ಮರಿಲಾರದೆ ಬರತಿನೋ ನಾನಿನ್ನ ತನಾ |
ಇಂಡಿ ತಾಲೂಕಾ ನನ್ನದು ಲಾಳಸಂಗಿ ಖೂನಾ |
(ಇಂಬಾಗಿ ನೆನದಾನೊ) ಮಡ್ಡಿಸಿದ್ದ

ಬಂದು ಅಲ್ಲಿ ನೆನೆದಾನೊ | ಭೂಯ್ಯಾರ
ನಾಗಣ್ಣನು ಮಾಡಿದ ಕವನಾ | ಹೊಲದಾಗ
ಬೆಳಂದಿಗಳು ಬಾಳೆಯ ಬನಾ

ಖ್ಯಾಲಿ ೮

ಬಂದು ಬಳಗ ಕೂಡಿರಿ ಬಾಳ |
ವರದಕ್ಷಿಣೆ ಕಾಡುವ ಕಾಳ | ಹುಟ್ಟಬಾರದೋ
ಹೆಣ್ಣು ಮಕ್ಕಳಾ |
ಸತಿಪತಿ ದಂಪತಿಗಳಾ | ಕಾಡತಿತ್ತೊ
ಬಡತನಾ ಬಾಳ | ದುಡಿದರ ಇಲ್ಲಾ ಪೂರ್ತಿ
ಸಂಬಳಾ | ತಿನ್ನತಾರೊ ತುಣಕ ತಂಗಳಾ |
ಹೊಟ್ಟೆಗಿಲ್ಲದೆ ಕೊರಗಿ ಕೊರಗಿ ಅಳತಾವೊ ಕರಳಾ |
ಅಂತಹ ಕೆಟ್ಟ ಕಷ್ಟದೊಳಗೆ ಹುಟ್ಟಿ
ಬಂತೂ ಹೆಣ್ಣು ಮಗಳಾ | ಸರಸ್ವತಿ
ರೂಪದವಳಾ | ಉರುಳಿ ಹೋದಾವೊ
ವರುಷ ತಿಂಗಳಾ | ಮದುವಿ ಮಾಡುವ
ಮಗಳಿಗಿ ಚಿಂತಿ ಮನದೊಳಾ |
ದುಡಿಯುತ್ತಿದ್ದರು ಅಗಿ ಒತ್ತಿ ಅಳಾ |
ಸವಿದು ಹೋಗ್ಯಾವೋ ಶರೀರ ತೋಳಾ |
ಕಣ್ಣೀರ ಸುರಿಸಿ ತಾಯಿ ಅಳತಾಳ |
ಆಯ್ದು ತಂದಾಳೊ ಕಟ್ಟಿಗಿ ಕುಳ್ಳಾ |
ಕಟ್ಟಿಗೆ ಮಾರಿ ಮಗಳಿಗೆ ಒಗದಾರ ಅಕ್ಕಿಕಾಳ |
ಮಗಳು ಹೋಗುವಾಗ ತಾಯಿ ಅಳತಾಳ |
ಎಷ್ಟು ಕಷ್ಟಬಂದರ ತಾಳ |
ಅತ್ತಿ ಮಾವನ ಮಾತ ಕೇಳ |
ದಾಟಬಾರದು ಗಂಡನ ಉಗಳ | ತವರಿನ
ಹೆಸರು ತಂದ ಅಪ್ಪನ ಮಗಳಾ |
ಅತ್ತಿ ಮಾವ ಕಾಡತಾರ ಬಾಳ |
ಹುಂಡಾ ತಂದರ ಮನಿಯಾಗ ಸ್ಥಳಾ |
ಕಸಗೊಂಡಾರೋ ಕೈಯಾಗಿನ ಕೂಳ |
ಕೊಟ್ಟರೋ ಹಳಸಿದ ಅನ್ನದ ಅಗಳಾ |
ತಿವಿಯುತ್ತಿತ್ತೋ ತಾಯಿಯ ಮಾತಿನ ಮುಳ್ಳಾ |
ನಾದನಿ ಇದ್ದಳೊ ಕೆಟ್ಟ ದುರುಳಾ |
ಹರಕೊಂಡು ಕುಂತಾಳ ತನ್ನ ಗುಳ್ಳಾ |

ಉರಿಬಂಕ್ಯಾಗ ಒಗದಾಳ ಚಗಳಾ |
ಒಳ್ಳೆ ಒಗೆತಾನಕ ಹಚ್ಚಾಳ ಜಗಳಾ |
ಅಲ್ಲದೊಂದು ಹೇಳಿ ಇಟ್ಟಾಳ ಠಿಗಳಾ |
ಅಘರಾದ ಒಂದು ಹೊರೆಸ್ಯಾಳೊ ಸುಳ್ಳಾ |
ಮಾಡ್ಯಾಳೆಂದೂ ಮನಿಯಾಗ ಕಳ್ಳ |
ಹೊಡಿ ಬಡಿ ಮಾಡ್ಯಾಳ ಬಾಳಾ |
ಹಾರಿ ಹೊಯಿತೋ ಹೆಣ್ಣಿನ ಎಸಳಾ |
ಅತ್ತಿಮಾವನಾದನಿ ಕೊಯ್ದಿದಾರೊ ಕೊರಳಾ |
ಗುಣ ನೋಡಿ ಕೊಡಬೇಕೋ ಮಗಳಾ |
ಬಾಯಿ ಮಾತಿಗೆ ಅಗಬ್ಯಾಡ್ರಿ ಮರುಳಾ |
ಬಿಟ್ರ ಹೊರಳಿ ಬರದು ಸರಳಾ |
ಕಳ್ಳಕೊಂಡು ನೀವು ಕಚ್ಚಬ್ಯಾಡರಿ ಬೆರಳಾ |

ಖ್ಯಾಲಿ ೯

ಮಾರಯ್ಯ ಮುತ್ತ್ಯಾನ ಮಹಿಮೆ ಹೇಳುವೆನೂ
ಕೂಡಿದ ಸಭೆದಾಗ | ಇಂಡಿ ತಾಲೂಕಿನಲ್ಲಿ
ಜನಿಸಿ ಬಂದ್ಯೋ ಮುತ್ತ್ಯಾ ಸಾಲೊಟಗಿ ಊರಾಗ |
ಮಾಳಿಂಗರಾಯ ನಿಂದ ಮಾರಯ್ಯನ ಹೆಸರಾಯಿತೋ ಜಗದಾಗ |
ಹಿಂದೆ ಮುಂದಿನ ಸುದ್ದಿ ಹೇಳತಿದ್ದರು ಕೆಳಿದ ಭಕ್ತಗ |
ಮುತ್ತ್ಯಾ ಆಡಿದ ಮಾತು ಹುಸಿಯ ಹೋಗಲಿಲ್ಲ
ಗುಂಡಿಟ್ಟ ಹೊಡೆದಂಗ |
ದಾರು ತರುವುದಕ ಮಾರಯ್ಯ ಮತ್ತೆ
ಹೇಳಿದರು ಅವಾಗ | ಅದರ ಆಗಲೆಂದು
ಮುತ್ತ್ಯಾನ ಮಾತಿಗ | ದಾರು
ತಗೊಂಡು ಹೊರಳಿ ಬರುವ ಮುಂದೆ
ಭಯ ಅವರ ಮನದಾಗ |
ಅಂಜುತ ಬಂದು ಹೊಕ್ಕಾರೂ ಮುಂದ
ಅಗರಬೇಡಾ ಊರಾಗ | ಪೋಲಿಸರ
ಪಾರ್ಟಿ ಮುಂದ ನಿಂತಿತೋ | ಪಾರ
ಅಗಲೆಂದು ಹ್ಯಾಂಗ | ಬೂಚ ಬಿಚ್ಚಿ
ಅವರು ಪಾಸನೆ ನೋಡತಾರೊ
ನೀರಾಯಿತೋ ಬಾಟಲ್ಯಾಗ |
ಅಲ್ಲಿ ಆಗಿದ ಸುದ್ದಿ ಇಲ್ಲೆ ತಿಳಿದಿತ್ತೊ
ಸತ್ತ್ಯೋಳ ಗಂಗಲಿಂಗಗ | ಏನು ಹೇಳಲಾರದೆ
ಕೇಳತಾನೊ ಮುತ್ತ್ಯಾ ಯಾರು

ತರುಬಿದರೂ ದಾರ್‍ಯಾಗ | ಮೋಸವಾಗಿತ್ತೊ |
ಮುತ್ತ್ಯಾ ಹೋಗಿ ಸಿಕ್ಕಿದವೊ ಪೋಲಿಸರ ಕೈಯಾಗ |
ಗಂಗಲಿಂಗ ಮುತ್ತ್ಯಾ ನಿಂತಿದ್ದ ಬಾಳ
ಶೇಷಗಿರಿ ಉರಾಗ | ಅದೇ ಊರಾಗ
ಬಡತಾನ ಕಾಡತಿತ್ತೋ ತಳವಾರ
ಹಣಮಂತಗ | ಮುತ್ತ್ಯಾಗ ಕೇಳದೆ
ಜೀತಕ ನಿಂತಾನೊ ಗೌಡರ ಹೊಲದಾಗ |
ಮುಂದ ಆಗುವ ಸುದ್ದಿ ಹಿಂದೆ ತಿಳಿದಿತ್ತೊ
ಸತ್ತೋಳ ಗಂಗಲಿಂಗಗ | ಹಣಮಂತಗ ಕರೆಯಿಸಿ
ಹೇಳತಾನೊ ಮುತ್ತ್ಯಾ ಹಾವು ಕಡಿತಾದೊ ನಿನಗ |
ಮುತ್ತ್ಯಾನ ಮಾತು ಮೀರಿ ಹಣಮಂತ
ಹೋಗ್ಯಾನೊ ದುಡಿಯುವುದಕ ಹೊಲದಾಗ |
ಮುತ್ತ್ಯಾ ಆಡಿದ ಮಾತು ಮನಸಿನ
ಒಳಗ ಮುಳ್ಳ ಮುರದಂಗ | ಅಂಜುತ
ಹೋಗ್ಯಾನೋ ಕೊಂಡ್ಯಾಗ | ಮಾಯದಿಂದ
ನಾಗರ ಹಾವು ಬಂದು ಕಡದಿತ್ತೂ ತಲಿಯಾಗ |
ಮುತ್ತ್ಯಾ ಆಡಿದ ಮಾತು ಹುಸಿ ಹೋಗಲಿಲ್ಲ
ಎಂದು ಬೊಬ್ಬ ಹೊಡೆದ ಹೊಲದಾಗ | ಏಳುತ
ಬೀಳುತ ಹಣಮಂತ ಹೊಂಟಾನೊ ಮುತ್ತ್ಯಾನ
ಭೇಟಿಗ | ತಪ್ಪು ಆಯಿತೆಂದಾ ಗುರುವೆ
ಒಪ್ಪಿಕೊಳ್ಳುವೆ ಎಂದು ಬಿದ್ದೊ |
ಪಾದದ ಮ್ಯಾಗೆ |
ಆರಂಭ ಆಗಲೆಂದು ಆಧಾರ ಹಚ್ಚ್ಯಾನೊ
ಹಣಮಂತನ ಹಣೆಮ್ಯಾಗೆ | ಆಧಾರ
ಹಚ್ಚಿದ ಮ್ಯಾಲೆ ಆರಾಮ ಆದಿತ್ತೆಂದು
ಹೇಳ್ಯಾನೊ ಕುಂತವರಿಗೆ ನಾ ಅಂದು
ನಡೆದವಗ ಬಿಟ್ಟಲ್ಲೊ ಗಂಗಲಿಂಗ
ಮೆಟ್ಟಿ ತುಳಿದಾನೊ ಭೂಮಿಮ್ಯಾಗ
ದೇಶದೊಳಗ ನಮ್ಮ ಲಾಳಸಂಗಿ ಊರು
ಬಹೀರ ಜಗದಾಗ | ಗುರುವ
ಮಡ್ಡಿಸಿದ್ಧ ಎಂದು ನೆನೆದಾನೊ
ಇಂಬ ಜಾಗಾದಾಗ | ಭೂಯ್ಯಾರ
ನಾಗಣ್ಣ ಮಾಡಿದ ಪದಗಳು
ಮಳಿಯ ಸುರದಂಗ |

ಖ್ಯಾಲಿ ೧೦

ಹೋಗೋಣ ಎಲ್ಲರು ಕೂಡಿ ಬರುವೋಣ
ಜಾತರಿ ಮಾಡಿ | ಮಾಳಪ್ಪನ ಪಾದಿಗಿ
ಬೀಳೊ ವರಗಳ ಬೇಡಿ |
ಮಾಳಪ್ಪ ಹಾನೋ ಸತ್ಯದ ಗಡಿ | ಮುಂಡಾಸ
ಪಡಕೊಂಡು ಭಕ್ತಿಯ ಮಾಡಿ | ಜತ್ತಿಯ
ರಾಜಗ ಬಾಳ ಸಂಶಯ ಕಾಡಿ | ಮನಸಾರೆ
ಮಾಡಾನ ಕೋಡಿ ನೋಡಬೇಕೆಂದೂ ಗುರುವಿನ
ಲಾಡಿ ಸರಕಾರ ಕಾವಲಕ ಇಟ್ಟಾನ ಖಡಿ |
ರಾಜ ಹೇಳ್ಯಾನ ತಾ ನಿಗರಾಡಿ |
ಬಂದವಗ ಹಾಕೆಂದ ಬೇಡಿ | ಒಪ್ಪಿಕೊಂಡು
ಸರಕಾರ ಕುಂತಾರ ಕೂಡಿ |
ಶಿವಪ್ಪ ಪಾರ್ವತಿ ಜೋಡಿ |
ಮರುತ್ಯಾಕ ಇಳಿದಾರ ಕೂಡಿ |
ಗ್ಯಾಸಿನ ಬೆಳಕ ಅವರು ಕಣ್ಣಾರೆ ನೋಡಿ |
ಕಣ್ಣು ಕಳೆದೋ ಮಾಯವ ಮಾಡಿ |
ಗಾಸ ಬಿದ್ದಾವ ಹಳ್ಳದ ಕಡಿ |
ಗಳಿಗೆ ಮುಂದೆ ಮಾಳಿಂಗರಾಯಗ
ಮುಂಡಾಸ ಮಾಡಿ | ಶಮನ
ಬಿಟ್ಟಾರ ಚೆಂದಾಗಿ ಜೋಡಿ | ಮುಂದಿನ
ಹೋಯಿಕವ ಮಾಡಿ | ಶಿವಪ್ಪ - ಪಾರ್ವತಿ
ಬಿಟ್ಟಾರ ಮಾಳಪ್ಪನ ಗುಡಿ |
ರಾಜ ಬಂದೊ ಗುಡಿಯಾಗ ಓಡಿ |
ಪೋಲಿಸರು ಬಿದ್ದು ಹೊರಳಾಡಿ |
ಮಾಳಿಂಗರಾಯ ಹಾನೋ ಬೆಂಕಿಯ ಕಿಡಿ |
ಗುರುವಿಗೆ ಕ್ಷಮಾ ಬೇಡಿ |
ತರತಿನಂದೊ ನೈವೇದ್ಯ ಮಾಡಿ |
ಕಳಸೋ ಗುರುವೆ ಉದ್ಧಾರ ಮಾಡಿ |
ಬರತಿನಂದೋ ಗಾಡಿಯ ಹೂಡಿ |
ಹರಿವ ಹಳ್ಳ ನಿಂತಿತೋ ಖಡಿ |
ಗುರುವ ಶಿಷ್ಯರ ಭೆಟ್ಟಿ ಗಡಿಮುಡಿ |
ಭೀರದೇವರ ಓಡುತ ಬಂದೋ ಭಟ್ಟ
ಕೊಟ್ಟು ತಿರುಗ್ಯಾಡಿ | ಸಿದ್ಧರು

ಬಿಚ್ಚಿ ಕುಣಿದರೊ ಜಾಡಿ | ಹೇಳಾರೊ
ಮುಂದಿನ ನುಡಿ | ಉಣ್ಣಿ, ಭಂಡಾರ
ಖಾರಿಕ ಮ್ಯಾಲ ಹಾರಿಸ್ಯಾರೊ ಹುಡಿ |
ಲಾಳಸಂಗಿ ಊರಿಗೆ ಹೋಗೋಣ ನಡಿ |
ಅಲ್ಲಿ ಅದ ಸಿದರಾಯನ ಗುಡಿ |
ನಾ ಅಂದ ನಡೆದವಗ ಗುರುವ
ಉದ್ಧಾರ ಮಾಡಿ | ಭೂಯ್ಯಾರ
ನಾಗಣ್ಣಾ ಮಾಡಿದ ನುಡಿ
ಮಗ್ಗ ಹಾಕಿ ನೇಯಿದಂಗೊ ಜಾಡಿ |
ಅವನ ಭಕ್ತಿಗೆ ಮೆಚ್ಚು ಗುರುವ
ಹಿಡಿದೊ ಮುತ್ತಿನ ಕೊಡೆ

ಖ್ಯಾಲಿ ೧೧

ದೈಗೊಂಡ ಕೆಟ್ಟ ಬಾಳಾ | ಗುರುವಿನ ಹಬ್ಬ
ಮರತಾನೊ ಮನದೋಳಾ |
ದೈಗೊಂಡ ಗೌಡನ ಆಸ್ತಿಯ ಬಾಳ |
ಅಷ್ಟು ಎಲ್ಲ ಆಗಿತ್ತೊ ಹಾಳಾ ಮನಿಯಾಗ |
ಇಲ್ಲೊವಷ್ಟೆ ಜ್ವಾಳಾ ಉಣಬೇಕೆಂದರ |
ಸಿಗವಲ್ಲದೊ ಕೊಳಾ |
ಕ್ಯಾಣೂರ ದೇವರ ಕೀರ್ತಿಯ ಬಾಳಾ |
ದೈಗೊಂಡ ಗೌಡ ಹೋಗ್ಯಾನ ಸರಳಾ |
ಭೀರಣ್ಣಾ ದೇವರಗಿ ವೊಳಪ್ಪ ಅಳಾ |
ಪೂಜಾ ಮೊಡತಾನೊ ಹಾರೆ ಗುಗ್ಗುಳಾ |
ಒಂಟಿಕಾಲಿನ ಮ್ಯಾಲ ಮಾಡಿ ತವಗಳಾ |
ಮಾಳಿಂಗರಾಯನ ಬಂತೊ ಕಳವಳಾ |
ಯಾವುದೊ ಹೇಳೋ ನಿಮ್ಮೆಯ ಸ್ಥಳಾ |
ಬೆಟಗೇರಿ ಗ್ರಾಮವು ನನ್ನ ಸ್ಥಳಾ |
ಭೀರಪ್ಪ ದೈಗೊಂಡಗ ಕೊಟ್ಟೊವರಗಳಾ |
ಆನಂದ ಆದಿತ್ತೋ ಗೌಡನ ನಟ್ಟಿದ ಮುಳ್ಳ |
ಕಿತ್ತಿ ಒಗದಂಗ ಆದಿತ್ತೋ ನಟ್ಟಿದ ಮುಳ್ಳು |
ಹಿಬಿಟ್ಟಿ ಹೊಂಟೊ ಗೌಡ ದಳದಳಾ |
ಲಾಳಸಂಗಿ ಊರಾಗ ಸಿದ್ದರಾಯನ ಸ್ಥಳಾ |
ಸಿದರಾಯ ಮುತ್ಯಾನದು ನಮಗಾದೊ ನೆರಳಾ |
ಭಿರಪ್ಪ ಚೆಂದ ಕುಡತಾನೊ ಜವಳಾ |
ಭುಯ್ಯಾರ ನಾಗಣ್ಣಾಂದು ಪದ ಬಾಳ ನಿವ್ವಳಾ |

ಅಡಪದಾ ೧೨

ಅಕ್ಕವ್ವ ಮಾಯವ್ವ ಕಾಯುತ್ತ ಆಡುಗಳನ್ನು ।
ತಿರುಗುತ್ತಾ ನಾದಾರ ದೂರಾ । ಗುಡ್ಡ ಗಂವಾರಾ ।
ಗುಂಡಬಡಗಿ, ಚಪ್ಪಕೊಡಲಿ ಕೈಯಾಗ ಹಿಡಿದಾರೇನಾ ।
ಕೃಷ್ಣಾನದಿ ದಂಡಿಗಿ ಅವರು ಬಂದಾರಾ ।
ಜೊತೆ ಇಬ್ಬರಾ ।
ಆನಂದದಿಂದ ಅವರ ಮೈಸುತ ಆಡುಗಳನ್ನು ।
ಕಟ್ಟಿ ಅರಣ್ಯಕ್ಕೆ ಬಂದರಾ । ದೈತ್ಯಗ ನೋಡ್ಯಾರಾ ।
ಕೀಲಾಸುರ ಎಂಬ ದೈತ್ಯ ಅವರಿಗೆ ।
ನೋಡ್ಯಾನಾ ನೋಡಿ ಹತ್ತಿರ ಕರೆದನಾ ।
ಹೆಸರು ಕೇಳ್ಯಾನಾ ।
ಬೆಕ್ಕಿಗೆ ಚೆಲ್ಲಾಟ ಇಲಿಗಳಿಗೆ ಸಂಕಟ ಅಪ್ಪಿಕೊಳ್ಳಕ್ಕೆ ।
ಅವಾ ಹೋಗ್ಯಾನಾ । ಗಡಗಡ ನಡುಗ್ಯಾನಾ ।
ಮಾಯವ್ವ ವಿಕರಾಳ ರೂಪವ ತೊಟ್ಟಾಳ ।
ಒಂದು ಹೆಜ್ಜೆಯು ಮುದೆ ಇಟ್ಟಾಳ ।
ನೆನೆಸಂದಾಳ ।
ಕಿಲಾಸುರ ರಕ್ಕಸನ ಮೆಟ್ಟಿಯು ತುಳದಾಳ ।
ನಾಮ ಉಳಸುತ ಹೇಳ್ಯಾನಾ । ಪ್ರಾಣವ ಬಿಟ್ಟಾನಾ ।
ದೈತ್ಯಗ ಮಾಯವ್ವ ಅಲ್ಲಿಯೇ ಹೇಳತಾಳ ।
ಕಿಲಕಟ್ಟಿ ಹಬ್ಬ ನಡಿಸಲೆಂದಾಳ । ಮಾಯವ್ವ
ಹೇಳ್ಯಾಳ ।
ಇಂಡಿಯ ತಾಲೂಕಿನ ಲಾಳಸಂಗಿ ಹೆಸರಾ ।
ಚಂದಣ್ಣಾ ಹಾನ ಕಲುಗಾರಾ ಬರೆದು ।
ಹೇಳವರಾ ।

ಖ್ಯಾಲಿ ೧೩

ಅಕ್ಕವ್ವ-ಮಾಯವ್ವ ಕೇಳಿರಿ ವಿಸ್ತಾರ ।
ಕೇಳಿದವರ ಜನ್ಮ ಆಗುದು ಉದ್ಧಾರ ।
ಕಿಲಾಸುರ ದೈತ್ಯನ ಮರ್ಧನ ಮಾಡ್ಯಾರ ।
ಮಂದನ ಗಿರಿಯಾಗ ಅಲ್ಲೆ ನೆಲೆಸಾರ ।
ಪುಣ್ಯದ ಕ್ಷೇತ್ರ ಅವರು ಅಲ್ಲಿ ಮಾಡ್ಯಾರಾ ।
ದೇವಿಯ ದೇವರ ಸ್ಮರಣೆ ಮಾಡತಾರ ।
ಚಂದನ ಗಿರಿಯಲ್ಲಿ ಅರಸ ಅರಸಿಯಾರಾ ।
ಸುಖದಿಂದ ಇರುತ್ತಿದ್ದರು ಸಂತೋಷ ಬರ್ಪೂರಾ ।

ಸೂರಮ್ಮ ದೇವಿಗೆ ನವಮಾಸ ಪೂರಾ |
ಬಂಕೆಯ ಕಾಡತಾವ ನಾನಾ ಪರಿಚೋರಾ |
ಬಳೆಗಳಾ ಮಾರುತ ಬಾಬಣ್ಣ ಬಂದಾನ |
ಸೂರಮ್ಮ ದೇವಿಯನ್ನು ಅಲ್ಲಿ ಕರದಾಳ |
ಸೂಲಗಿತ್ತಿಯರನ್ನು ಕಳಿಸಂತ ಹೇಳ್ಯಾಳ |
ಒಪ್ಪಿಕೊಂಡು ಬಾಬಣ್ಣ ಸಾಗಿ ನಡೆದಾನ |
ಬಾಬಣ್ಣ ಹೇಳತಾನ ನಡೆದ ವಿಸ್ತಾರ |
ಸೂಲಗಿತ್ತಿಯರನ್ನು ಕಳುಹಿಸು ಅಂತ ತಂಗಿ ಹೇಳ್ಯಾಳ |
ಉಕ್ಕಿನ ಉಗರವನ್ನು ತಯಾರ ಮಾಡ್ಯಾರ |
ಸುಬ್ಬವ-ನಾಗವಗ ಹೋಗುಂತ ಹೇಳ್ಯಾರ |
ಬಹುಮಾನ ಕೊಡತಿನಿ ಕೂಸಿನ ಕೊಲ್ಲಿದರ |
ಅದರ ಅಗಲಿ ಅಂತ ಒಪ್ಪಿಕೊಂಡಾರ | ಚಂದನ |
ಗಿರಿಗೆ ಬಂದು ನಿಂತಾರಾ| ಸೂರವ್ವಳ |
ಎಡ-ಬಲಕ ಬಂದು ಕುಂತಾರ |
ಪ್ರಸೂತಿ ವೇದನೆ ಸೂರಮ್ಮ ಮಾಡ್ಯಾಳ |
ಐತಾರ ಅಮಾವಾಸ್ಯೆ ಇತ್ತರೀ ಪೂರಾ |
ಸಾಲಯ ದಿವಟಿಗಿ ಬೆಳಕಿತ್ತು ಜೋರಾ |
ಭೀರಣ್ಣಾ ದೇವರು ಜನಿಸಿ ಬಂದಾರ |
ಸುಬ್ಬವ್ವ ನಾಗವ್ವಂದು ಸೊಂಟಾ ಮುರದಾರ |
ಅಳಕೊಂತಾ ಕುಂತಾರ ಮುಲ್ಯಾಗ ಜೋರಾ |
ಮನುಷ್ಯ ಅಲ್ಲಕೂಸು ಸಾಕ್ಷಾತ್ ದೇವರಾ |
ತಪ್ಪಾಯಿತೆಂದು ಮರಳಿನಡೆದಾರಾ |
ಜಗದಾಗ ಜೀಹೀರಾ ಲಾಳಸಂಗಿ ಊರಾ |
ಮಟ್ಟಿಯ ಸಿದ್ದ ಎಂದು ಅಲ್ಲಿ ನೆನದಾರಾ |
ಹಾಡಕಿ ಮಾಡತಾರ ಬಾಳಚಂದ ಜೋರಾ |
ಲಾಳಸಂಗಿ ಊರಾಗ ಚಂದಣ್ಣ ಕವಿನಾರ |
ನಾ ಕೊಟ್ಟಿರುವ ಬಳಿ ಕೇಳ ಹೇಳತಾವ |
ಹೆಸರಾ |

ಅಡಪದ ೧೪

ತಿಳಿಕೋರೋ ಅರ್ಥ ಹೇಳುವೆನೊ |
ಗುರ್ತ | ಅರ್ಥ ತಿಳಿಯದೆ ಹಾಡತೀವಿ ಅರ್ಥ |
ಕುದರಿಯಂಗ ಕುಣಿದು |
ಕತ್ತಿಯಂಗ ಚೇಲಿ ಮುಡಬೇಡ ಗಮ್ಮತ್ತು |

ಸೀತಾನ ಕಾಲಾಗ ರಾವಣ ಸತ್ತ |
ದ್ರೌಪದಿ ಸಲುವಾಗಿ ಕೀಚಕ ಸತ್ತ |
ಪದಗಳ ಹಾಡಿ ವೈರಿ ಆಗಿ ಹೋಗಿ
ಹೋಗಲೆ ನೀ ಸೋತೆ |
ಬಾಹಳ ದಿನದು ಅದ ಅಪ್ಪ ಹಳೆಯ ಮಾತು |
ಗಣಪತಿ ಮುಂದೆ ಹೋಗಿ ನೀ ಸುರೀತೆ |
ಗೊಳ್ಳಕೊಟ್ಟು ಹೋಗಬೇಡ | ತಮ್ಮ
ತಿಳಿಯಿತಾದ ಇವತ್ತು |
ತೋಡಿಗಿ ತೋಡಿ ಹಾಡಬೇಕು ಶಿಸ್ತ |
ದಾಟಿಯ ಹಾಕಿ, ಹಾಡಬೇಕು ಮಸ್ತ
ಕತ್ತೆಗೆ ಏನು ಗುರ್ತು ತಮ್ಮ |
ಕತ್ತಿ ಕಾಳ ಮುಸಲಿ ಅಂತ |
ಇಂಡಿ ತಾಲೂಕದಾಗ ಲಾಳಸಂಗಿ |
ಗುರ್ತು ಭೂಲಿಳಿಸಿದ್ದ ನೆನೆದಾನ |
ಬೈಲಾಗಿ ಅಂತ | ಕಂದ ಚಂದಣ್ಣಾ
ಪದಮಾಡಿ ಹೇಳ್ಯಾನ ಹುಡುಗರಿಗೆ
ಹಾಡರಂತ ||

**ಗಣಪತಿ ಪದ ೧೫**

ಸುಭೆದಾಗ ಕರೀತಿನ ಬಾರೋ ವಿನಾಯಕ |
ಹಣಿಹಚ್ಚಿ ಕಣಿತೆವು ನಿಮ್ಮ ಚರಣಕ |
ಪುತ್ರವಾಗಿ ನಿನ್ನ ಸ್ತೋವು ಮಾಡತಿನಿ |
ಬಾ ನಿನ್ನ ಹಂತ್ಯಾರ |
ಪತ್ರಿ ಪುಷ್ಪಿ ತಂದು ನಿನ್ನ ಪೂಜಾಕ |
ಕರಿಕಣ್ಣಿನ ತೆಂಗು ಒಡೆಯ ನಿನ್ನ ಪಾದಕಿ |
ಬಂದು ಕಂಟಕ ಬೈಲು ಮಾಡೊ ತಂದೆ |
ಕಾಡುವ ಕಂಟಕ |
ಪಾರ್ವತಿಗೆ ಪುತ್ರ ನೀನು ವಿನಾಯಕ |
ಎಲ್ಲರೂ ಕರೆದಲ್ಲಿ ನಿನ್ನ ಕಾಯಕ | ಕರರೆ
ಪತ್ರಿ ಕಣಗಿಲ ಹೂವಾ ಕರಿಕಡಬ |
ಪೂಜಾಕ |
ಚೌತಿ ಚತುರ ದೇಶ ನಿನ್ನ ಹಬ್ಬಕ್ಕ |
ಮೆರವಣಿಗೆ ಮಾಡತಾರ ದುಂದ ಖಿಡಕ |
ಸಭೆದಾಗ ಬಂದು ಹಾಜರ ಆಗೋ ತಂದೆ |
ಕಾಡುವ ಕಂಟಕ |

ಸರಸ್ವತಿ ದೇವಿ ವಿದ್ಯೆದ ಬುಕ್ |
ನಾಲಿಗೆ ಮ್ಯಾಲ ಬಂದು ನೆಲೆಯಬೇಕು |
ನಿನ್ನ ವಿದ್ಯೆದ ಜ್ಞಾನದ ಜ್ಯೋತಿ |
ಬೆಳಗುವುದು ಜಗಕ |
ಇಂಡಿ ತಾಲೂಕದಾಗ ಲಾಳಸಂಗಿ ಖಡಕ |
ಚಂದಣ್ಣ ಪ್ರಾಪ ಹಾಕ್ಯಾನ ಪದಕ |
ಕಂದ ಬಸವರಾಜ ಹಿಮ್ಮೇಳ ಕರಕೊಂಡು |
ತಿಳಿಸ್ಯಾನ ದೈವಕ ||

ಖ್ಯಾಲಿ ೧೬

ಬಾ ತಂಗಿ ಹೋಗೋಣ ತಡಯಾಕ |
ಗೋಳಸಾರ ಕ್ಷೇತ್ರ ನೋಡುವುದಕ |
ಗೋಳಸಾರ ಕ್ಷೇತ್ರ ನೋಡುವುದಕ ಮುತ್ತ್ಯಾನ |
ದರ್ಶನ ಮಾಡುವುದಕ |
ಸುತ್ತ ದೇಶದಾನ ಜನಾ ಬರತಾದ |
ಜಾತರಿ ಮಾಡುವುದಕ ಕಾಯಿ
ಕರ್ಪೂರ ಒಡಕೊಂಡು ಮುತ್ತ್ಯಾನ
ದರ್ಶನ ಮಾಡುವುದಡಿ ಬಂದಂತಹ
ಕಷ್ಟ ಬೈಲ ಮಾಡತಾನ ಕಾಡುವ
ಕಂಟಕ
ಒಡ್ಡಿ ವಾಲಗ ಕುಂಭ ಬರತಾವ |
ನಡುಊರು ಬಜಾರಕ | ಮುತ್ತ್ಯಾನ
ಪಲ್ಲಕ್ಕಿ ಮುಂದ ಮೆರವಣಿಗೆ
ಬರತಾವ ಗುಡಿತನಕ | ಗುಡಿಯಾಗ
ಬಂದು ಮುತ್ತ್ಯಾನ ಪೂಜೆ ಮಾಡುವುದಕ |
ಸಿದ್ದರಾಯ ಮುತ್ತ್ಯಾನ ದರ್ಶನ ಮಾಡಿ
ಬರುವುದಕ |
ತ್ರಿಮೂರ್ತಿ ಮುತ್ತ್ಯಾನ ಕಾರಿನಲ್ಲಿ
ಹೊರಟರೂ ಆ ಕ್ಷಣದಲ್ಲಿ | ಆಡುವ
ಶಿಸುವಿನ ಮ್ಯಾಲ ಕಾರು ಹಾಯ್ದು
ಪ್ರಾಣ ಹೊಂಟಿತೋ ಅಕ್ಷಣಿಕ |
ಸುತ್ತಿನ ಜನರು ಬೈಯುತ ಬಂದಾರ
ಅಕ್ಷಣ | ತ್ರಿಮೂರ್ತಿ ಮುತ್ತ್ಯಾ
ಶಾಂತಿಯ ಹೇಳ್ಯಾರ ಆ ಜನಕ |

ಸತ್ತ ಶಿಸುವಿನ ಮ್ಯಾಲ ಶಾಲು ಹೊಚ್ಚಿ
ಎಬ್ಬಿಸಾರೊ ಮ್ಯಾಕ | ಶಿಸುವು ಎದ್ದುಬಿದ್ದಾದ
ಮುತ್ತ್ಯಾನ ಪಾದಕ | ಸುತ್ತಿನ ಜನರು
ಮುತ್ತ್ಯಾನ ಆಗ್ಯಾರ ಆಗಿನ ಯಾಳ್ಯಾಕ |
ಮುತ್ತ್ಯಾನ ಪಾದ ಹಿಡಿಯುತ ಬಂದಾರ
ಆಕ್ಷಣ |

ಇಂಡಿ ತಾಲೂಕದಾಗ ಲಾಳಸಂಗಿ
ಊರಾ ಜಾಹಿರ ಜಗಕ | ಸುತ್ತ
ದೇಶದಾನ ಭಂಡಾರ ಬರತಾವಿ |

ಹಾಡುವ ವ್ಯಾಳ್ಯಾಕ ಕಂದ ಚಂದಣ್ಣ
ಪದಗಳ ಮಾಡ್ಯಾನ ಹಾಡುವುದಕ |
ಬಸವರಾಜ ಕರಕೊಂಡು ತಿಳಿಸ್ಯಾನ
ದೈವಕ |

ಖ್ಯಾಲಿ ೧೭

ಅಕ್ಕವ್ವ-ಮಾಯವ್ವ ಕೂಡಿ
ಲಿಂಗ ಭೀರಣ್ಣನ ಜ್ವಾರೆ ಮಾಡಿ |
ಆರ್ಯಾಣದಾಗ ಸಿಕ್ಕ ಶಿಸುವಿನ
ಅನೇಕ ತರದಿಂದ ಜ್ವಾಕಿಮಾಡಿ |

ಭೀರಣ್ಣ ಬೆಳೆದಾನೊ ಕುಂಬಳ ಕುಡಿ
ಅಕ್ಕಗ ಕಾಡತಾನೊ ಚಂಡು ಬೇಡಿ |
ವಾರಿಗಿ ಹುಡುಗರದಾಗ ಹೋಗಿ
ಅವತಾರ ಆಟು ದೇವರ ಹೂಡಿ |

ಹುಡುಗರ ದಂಡ ಇತ್ತೊ ಒಂದು ಕಡಿ
ಪುಂಡದೇವರ ಇದಿತೋ ಇನ್ನೊಂದು ಕಡಿ
ಲಗ್ಗಿ ಆಟದ ಬಗ್ಗೆ ಆಡಲಿಲ್ಲ ಜಗ್ಗಿ ಹಿಡಿದರು
ಎಲ್ಲಾರೂ ನೋಡಿ |

ಚಂಡ ಹೊಡೆದಾನೂ ಲಗ್ಗಿಯ ಹೂಡಿ
ಕಾಣಗಲ್ಲಿ ಬಂದಂಗೂ ಬಡದಾಡಿ
ಧರುಣಿ ಕೇಸುರಾಯನ ಮಗನಿಗೆ
ಆಗ ಚಂಡಿನ ಆವತಿ ಮಾಡಿ |

ಹುಡುಗರು ನಿಂತಾವ ಗಾಬರಿಗೂಡಿ |
ಭೀರಣ್ಣ ನಿಂತಾನೊ ನಗುಮುಖ ಮಾಡಿ |
ಅಷ್ಟು ಹುಡುಗರೆಲ್ಲಾ ಬಿಟ್ಟು ಓಡುತಾರೊ |
ಎಲ್ಲರು ಮನಿಯ ಕಡಿ |

ಊರಾನೆ ಜನ ಬಂತೂ ಅಗಸಿಯ ಕಡಿ |
ತಾಯಿ-ತಂದೆ ಅಳತಾರೊ ತಾವು ಬೋರಾಡಿ |
ಸತ್ತ ಶಿಸುವಿನ ಅಸ್ತಿ ಇಟ್ಟು ದೇವರ
ಎಬ್ಬಸ್ನಾನ ಜೀವಂತ ಮಾಡಿ |
ಇಂಡಿ ತಾಲೂಕದಾಗ ಲಾಳಸಂಗಿ
ಜಯವೇರಿ | ಮಡ್ಡಿಸಿದ್ಧ ನೆನದಾನ
ಹಳ್ಳದ ದಾರಿ | ಮತ್ತು ಹುಡುಗರೆಲ್ಲ
ಪದಗಳ ಹಾಡತೇವು ಎಲ್ಲರ
ಸಿದ್ಧರ ನುಡಿ |

ಹಡಪದ ೧೮

ಹಾಡಿ ಹೇಳುವೆನು ಸಭೆದಾಗ ಬಂದೂ
ಮಾಳಿಂಗರಾಯನ ಕತಿ ಚೆಂದೋ | ಮಾಳಪ್ಪ
ಇದ್ದರೀ ಸಣ್ಣಕಂದೂ | ಬೆಳೆದು ಮಾಳಪ್ಪ
ಪ್ರಾಯ ತಾ ಬಂದೋ |
ಸೋಮರಾಯ ಕನಾಬಾಯಿ ಮಾತನಾಡತಾರ
ಕನ್ನೆ ಹುಡುಕೋಣ ಮಾಳಪ್ಪಗೊಂದು |
ಲಗ್ನ ಮಾಡೋಣ ಮಾಳಪ್ಪಗೊಂದು |
ಸೊನ್ನಾರಿ ಸಿದ್ಧನ ಅರುವುಂಟಾಗಿ ತಾ
ಬಂದೊ |
ಗುರುವಿನ ನೋಡಿ ಎಲ್ಲರೂ ಕೂಡಿ
ಹರುಷ ಪಟ್ಟರೊ ಮನ ಕಂದೂ |
ಮುಂದಿನ ಚಿಹ್ನೆ ತಿಳಿಸ್ಯಾನೊ
ಗುರು ಬಂದೂ | ಇಂದೆ ಹೋಗೋಣ
ಇಂಡಿ ತಾಲೂಕ ತಾಂಬಾಕ್ಕೆ ಅಂದೋ |
ಇಷ್ಟೆಲ್ಲಾ ಕೇಳಿ ಸೋಮರಾಯ ಗೌಡ
ಸಾಗಿ ನಡದಾನ ಭಾರದಿಂದೊ |
ತಾತಾರಾಯ ಅವುತಾಬಾಯಿ ನೋಡಿ
ಅಂದೋ | ಹೋಗಿ ಕುಂತಾರ
ಮನಿಯ ಒಳಗ ಬಂದೊ |
ಎಂದೂ ಬರಲಾರದ ಪುರುಷ ಬಂದಾನ
ಮರ್ಯಾದೆ ಕೊಟ್ಟಾರೊ ಮನಕಂದೊ |
ಶರಣೆ ಮಾಡ್ಯಾಳ ಲಕ್ಷ್ಮಿದೇವಿ ಪಾದಕ
ಬಂದೊ | ನಿಶ್ಚ ಮಾಡ್ಯಾರ ಲಕ್ಷ್ಮೀ
ದೇವಿಗೆ ಅಂದೊ |

ಖಾರಿಕ, ಕೊಬ್ಬರಿ ಹಾಕಿ ಉಡಿಯಾಗ
ಹಾಕ್ಯಾರ ಮುತ್ತೈದೆಯರು ಬಂದೂ |
ಮಹೂರ್ತ ನೋಡ್ಯಾರ ಲಗ್ನನ ಮಾಡಿ
ಬೇಕಂದೂ | ಅಕ್ಕಿಕಾಳ ಹಾಕ್ಯಾರ
ಎಲ್ಲರು ಬಂದೂ |
ಇಂಡಿ ತಾಲೂಕದಾಗ ಲಾಳಸಂಗಿ ಊರಾ |
ಅದ ಕೇಳರಿ ಬಾಳ ಚಂದೋ | ಸುರದಂಗ
ಮಲ್ಲಿಗಿ ದೇವರ ಮುಂದೋ | ಕಂದ
ಚಂದಲ್ಲಿ ಪದ ಮಾಡ್ಯಾನ ಹಿಂಗೋ |

ಯಾಸಿ

ಹಡಪದ ೧೯

ಮಾಡಕೋರೊ ತರ್ಕ ಹೇಳುವೆನೊ ಚೊಕ್ಕ |
ಹವಳ ಪೋಣಿಸಿದಾಗ ಮುತ್ತಿನ ಸರಕ |
ಮಾನಗೇಡಿ ಮಂದಿ ಜೋಡಿ ಬೆಳತಾನ
ಹಾಡಿ ಸುಳ್ಳೆ ಸಾಯುವುದ್ಯಾಕ |
ಅನಿ ಅಗಿ ಕಬ್ಬ ಕಡಿಯುವುದ್ಯಾಕ |
ಸ್ವಾನಿನಂಗ ಸುಳ್ಳೆ ಬೊಗಳುವುದ್ಯಾಕ |
ತಿರುಗಿ ತಿರುಗಿ ಬಂದಿದೊ ನೀನು
ಮಾನವ ಜನ್ಮಕ |
ಹಾಡ ಹಾಡತಿ ಮಳ್ಳ ಎಲ್ಲಿಟ್ಟು ಲೆಕ್ಕ |
ಸುಳ್ಳೆ ಹೈರಾಣ ಆಗತಿಯಾಡಿ | ಹಿಮ್ಮೇಳ
ಹಾಡವರು ಒಮ್ಮುನ ಕೊಳು ತಿಂದು
ಹೋಗತಾರೊ ಮನಿತನಕೂ |
ಸೊಡ್ಡು-ಸೊಡ್ಡು ಹೊಡಿಬೇಕೊ ಖಡಕಿ |
ಬುಡಕ ಬಿದ್ದು ನೆಳ್ಳತಿರೊ ನೆಲಕ |
ಎಲ್ಲರು ಎದ್ದು ಹೋಗುವ ಮುಂದು
ಹೋಗತಿರೊ ಮನಿತನಕ |
ಇಂದಿ ತಾಲೂಕದಾಗ ಲಾಳಸಂಗಿ ಖಡಕ |
ಚಂದಣ್ಣ ಪ್ರಾಸ ಹಾಕ್ಯಾನ ಪದಕ |
ಕಂದ ಬಸವರಾಜ ಹಾಡಿ ತಿಳಿಸ್ಯಾಂದೂ
ಕರೆದಂತಹ ಸಭೆಕ |

ಅಡಪದ ೨೦

ಸಭಾಕೂಡಿರಿ ಬಹಳ ಜನ ಇಲ್ಲಿ ಹಾಡಿ
ಹೇಳುವೆನೂ ನಾ ಸಭೆದಲ್ಲಿ | ತಪ್ಪನಾದರ

ಮಾಡಿದರ ನೀವು ಮಾಡಿರಿ ದೈವ ಇಲ್ಲಿ
ಕೈಯ ಮುಗದು ಹೇಳುವೆ ಯಾರು
ಗದ್ದಲ ಮಾಡಬೇಡಿರಿ ಸಭೆದಲ್ಲಿ |
ಕ್ಯಾಣೇಸೂರ ಭೂಮಿಯ ಮ್ಯಾಲೆ
ಮರೆಯ ತಿದ್ದು ಬಾಳ ಅಮಲು |
ನನ್ನಷ್ಟು ಶೂರಾ ಯಾರು ಅಲ್ಲಂತ
ತಿಳಿದೂ ಮನದಲ್ಲಿ | ಅವನ ಕಲೆಯ
ಸಾರ ಹೇಳತಿನಿ ಕೇಳಿರಿ ನಿವಿಲ್ಲಿ
ಒಂದೇ ಉಸಿರು ಬಿಟ್ಟರಲ್ಲ |
ಹೋಗತ್ತಿತ್ತೋ ಮೂರು ಮೈಲಿ |
ಮನಗತ್ತಿದ್ದೂ ಮೂರು ತಿಂಗಳ
ಒಂದೇ ಮಗ್ಗಲಿನಲ್ಲಿ | ಕ್ಯಾಣೆಂದು
ಬರದಿತ್ತೊ ವದ್ಲಾ ಇತ್ತೂ ಲಿಂಗ
ಭೀರಣ್ಣನ ಕೈಯಲ್ಲಿ
ಭಿರಣ್ಣದೇವರ ಭೂಮಿಯ ಮ್ಯಾಲೆ
ಹುಡುಕುತ ನಡದೊ ಕ್ಯಾಣೆಸೂರ ಅಲ್ಲಿ
ಭೀರಣ್ಣ ಬಿಲ್ಲು ಹಿಡಿದು ಹೊಂಟಾನೂ
ತಾನು ಭರದಲ್ಲಿ ದೈತ್ಯ ಇದರ ನಿಂತು
ಕೇಳತಾನ ಹೊಂಟದಿ ಎಲ್ಲಿ |
ಬಿಟ್ಟಾನ ಬಾಣ ದೈತ್ಯಗ ಅಲ್ಲಿ
ದೈತ್ಯ ಹೇಳತಾನ ಭೀರಣ್ಣಗ
ಬಿಕ್ಕುತ ಅಲ್ಲಿ | ದೈತ್ಯನದು
ಖಾನಾ ಉಳಿಯ ಬೇಕೊ ಅಜರಾಮರ ಅಲ್ಲಿ |
ಸೂರ ಹೊಂತಾ ಭೀರಣ್ಣ ಅಲ್ಲಿ
ಕ್ಯಾಣಗನೂರಾ ಅನಶ್ಯಾನ ಅಲ್ಲಿ |
ನಾಮ ಉಳಿಯಿತೊ ದೈತ್ಯರು
ಅಜರಾಮರ ಅಲ್ಲಿ | ಹಾಡಿ
ತಿಳಿಸುವೆನೊ | ಮುಂದಿನ ಸಂದಿನಲ್ಲಿ |
ಇಂಡಿ ತಾಲೂಕದಾಗ ಲಾಳಸಂಗಿ |
ಜಯಭೇರಿ ಹೊಡೆದಾದ ನಾಡಮ್ಯಾಲಿ |
ಮದ್ದಿಯ ಸಿದ್ಧ ಯಾವತ್ತು ನಮ್ಮ
ಹಿಂಬಾಲ | ಕೆಂದ ಚಂದಣ್ಣನ ಕವನ
ಕೇಳದರ ಬಾಣ ಹೊಡೆದಂಗ ಎಲೆಯಲ್ಲಿ |

ಅಡಪದ ೨೧

ನನ್ನ ಜೋಡಿ ಹಾಕಬೇಡೋ ಜಿದ್ದ |
ನಿಮ್ಮ ಸೊಕ್ಕುಮುರಿತೀನಿ ಒದ್ದು |
ಭೀರಣ್ಣ ಹೀಗೆ ಹೇಳುತ್ತಿದ್ದ |
ಸುಬ್ಬವ್ವ ನಾಗವ್ವ ಉಳಿಲಿಲ್ಲೋ ತಿಳಿದು |
ಸುಬ್ಬವ್ವ ನಾಗವ್ವ ಹೋಗ್ಯಾರ ಎದ್ದು ಹೇಳತಾರ
ನಾರಾಯಣಗೌಡರ ಮುಂದಾ | ಬಾಳ ಬೆಂಕಿಯಾದಪ್ಪ
ಕಂದಾ ಹದಿನಾರು ಹಲ್ಲ ಮುರದಾದ ಒದ್ದು |
ನಾರಾಯಣ ವಿಚಾರ ಮಾಡಿದ್ದ | ಬುಡಬುಡಕೆ
ವೇಷವ ಧರಿಸಿದ್ದ | ಭಾಷೆ ಹೇಳುತ್ತ ನಡೆದಿದ್ದ |
ಸೂರಮ್ಮನ ಮನಿತಾನಾ ತಾ ಬಂದಾ |
ಸೂರಮ್ಮ ಬುಡಬುಡಕೆಗೆ ಕರಿತಾಳಾ |
ಭಾಷೆ ಹೇಳಬೇಕೆಂದಳಾ | ಭಾಷೆ ಹೇಳತಿನಿ
ಅಂದಾನಾ ವಚನಾ ಕೊಡಬೇಕವ್ವ ನೀನಾ |
ತಾಯಿ ತಂದೆಗೆ ಆದ ಹೀನಾ |
ಬಂಧು ಬಳಗಕ ಅವಮಾನ | ಮಾವ
ನಾರಾಯಣಗ ವೈರಿಹಾನ | ಕೂಸಿನ
ಬಿಡಬೇಕು ಅರ‍್ಯಾಣ |
ನಾರಾಯಣ ದೈತ್ಯರಿಗೆ ಕಳಸ್ಯಾನ | ಕೂಸಿನ
ಬಯಿಬೇಕೊ ಅರ‍್ಯಾಣ | ಕೂಸಿನ ಕೊಲ್ಲಿ
ಬೇಕೆಂದಾನಾ | ಕೊಲ್ಲಿದರ ಕೊಡತಿನಿ
ಬಹುಮಾನಾ |
ಲಾಳಸಂಗಿ ಊರಾಯಿತೊ ವಾಯಣ |
ಮಡ್ಡಿಸಿದ್ದ ದೇವರ ನೆನದಾನಾ | ಕಂದ
ಚಂದಣ್ಣಾ ಬರದಾನ ಕವನ |
ಬಸವರಾಜ ಹಾಡಿ ಹೇಳ್ಯಾನಾ |

ಅಡಪದ ೨೨

ಹೋಗೋಣ ನಡಿ ತಮ್ಮ ಜಾತರಿ ಮಾಡುವುದಕ |
ಮಾಳಿಂಗರಾಯನ ದರ್ಶನ ಪುಣ್ಯ ಪಡೆಯುವುದಕ |
ಪರವು ಬೇಡುವುದಕ |
ಸುತ್ತದೇಶ ಜನ್ಮವಂತರು ಜಾತರಿ ಮಾಡುವುದಕ |
ಮಾಳಿಂಗರಾಯರ ಜಾತ್ರಿಯ ಮಾಡಿ ಮುಂಡಾಸ
ನೋಡುವುದಕ | ಮುಂಡಾಸ ನೋಡಿ ಜನರೂ

ಹೋಗ್ಯಾರ ಹಾಲಿ ಹಳ್ಳಿಕ ಉಣ್ಣಿ ಭಂಡಾರ ಹಾಕಿಸಾದು
ಕೇಳಂ ದುಂದ ಖಡಕ | ಅಲ್ಲಿ ಜನ್ಮ ಸಾರ್ಥಕ

ಸಿಡಿಯಣ್ಣಾ ಸಿಲವಂತಿ ಬನಹಟ್ಟಿ
ಲಾಯವ್ವ ಬರತದ ಹಾಲಿ ಹಳ್ಳಿಕ |
ಮಾಳಿಂಗರಾಯಗ ಭೇಟಿ ಆಗುವರು
ಆಗಿನ ಯಾಳ್ಯಾರ | ಭೇಟಿಯಾಗಿ
ಹೋಗ್ಯಾರ ಕೇಳರಿ ತಮ್ಮ ತಮ್ಮ ಸ್ಥಾನಕ್ಕೆ |

ಸುತ್ತ ದೇಶದ ಮೇಳ ಬರತಾವ
ಹುಲಜಂತಿ ಗ್ರಾಮಕ್ಕ | ಮುತ್ತ್ಯಾನ
ಘವಳ್ಯಾಗ ಹಾಡಿದರ ನಮ್ಮದು
ಜನ್ಮ ಸಾರ್ಥಕ | ನಡೆದ ವಿಸ್ತಾರ
ಹಾಡಿ ತಿಳಿಸಿನಿ ಕುಂತ ದೈವಕ |
ಮಾಳಿಂಗರಾಯರ ದರ್ಶನ ಮಾಡಿದರ
ಜನ್ಮ ಸಾರ್ಥಕ | ನಿಂದು ಜನ್ಮ ಸಾರ್ಥಕ ||ಪ||

ಇಂಡಿ ತಾಲೂಕ ಲಾಳಸಂಗಿ ಊರು ಜಾಹಿದ
ಜಗಕ್ಕೆ | ಮಡ್ಡಿಸಿದ್ದ ಆಶೀರ್ವಾದ ನಮ್ಮ
ಭಕ್ತಿ ಭಾವಕ್ಕೆ ||
ಚಂದಲ್ಲ. ಪ್ರಭು, ಪ್ರಾಸ ಹಾಕ್ಯಾನ ಈ ಪದಕ |
ಬಸವರಾಜ ಹಿಮ್ಮೇಳ ಹರಕೊಂಡು ತಿಳಿಸ್ಯಾನ
ಕೇಳರಿ ದೈವಕ | ಆಗ ಜನ್ಮ ಸಾರ್ಥಕ |

ಯಾಕರೇ ಬರತಾವ ಹಿಟ್ಟ ಜೀವ
ತಿನ್ನಾಕ | ಬಂದು ಮಾರಿ ನೋಡಿ
ಕಣ್ಣೀರು ಸುರಿಸಾಕ |

* * *

## ೨. ಪರಾಮರ್ಶನ ಗ್ರಂಥಗಳು

೧. ಚಿಲಮಿ ಎಲ್.ಬಿ., (ಸಂ), ಅಲಭ್ಯೆರಿ ಕವಿಯ ಡೊಳ್ಳಿನ ಹಾಡುಗಳು, ಅಪ್ರಕಟಿತ ಕೃತಿ

೨. ರವೀಂದ್ರನಾಥ ಕೆ., ಕರ್ನಾಟಕ ಮಠಗಳು ಮತ್ತು ಕನ್ನಡ ಸಾಹಿತ್ಯ, ಪ್ರಭುದೇವರ ಜನಕ್ಯಾಣ ಸಂಸ್ಥೆ ಸಂಡೂರು, ೨೦೦೭

೩. ತಿಪ್ಪೇರುದ್ರಸ್ವಾಮಿ.ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ. ಮೂರ್ತಿ, ಕೃಷ್ಣರಾಜಪುರಂ, ಮೈಸೂರು, ೧೯೯೨

೪. ರಹಮತ್ ತರೀಕೆರೆ, ಕರ್ನಾಟಕದ ನಾಥ ಪಂಥ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೫. ಶಿವಕುಮಾರಸ್ವಾಮಿ ಸಿ.ಎಸ್., ಕರ್ನಾಟಕ ಜಾತ್ರೆಗಳು, ಕನ್ನಡ ವಿಭಾಗ, ಸ್ನಾತಕೋತ್ತರ ಕೇಂದ್ರ ಬಿ.ಆರ್. ಪ್ರಾಜೆಕ್ಟ್, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೮

೬. ಹನುಮಂತಯ್ಯ.ಬಿ.ಆರ್., ಕುರುಬರ ಚರಿತ್ರೆ, ಪ್ರತಿಭಾ ಪ್ರಕಾಶನ, ಎಚ್.ಪಿ.ಜೆ. ಮೈಸೂರು, ೧೯೯೬

೭. ಒಡೆಯರ ಡಿ. ಹೆಗ್ಗಡೆ, ಕುರುಬ ಜನಾಂಗದ ರಾಜಕೀಯ ಇತಿಹಾಸ, ಮೈಸೂರು, ೨೦೦೫

೮. ಚನ್ನಪ್ಪ ಕಟ್ಟಿ, ಕುರುಬ ಜನಪದ, ಆರ್.ಎಸ್. ವಾಡೇದ ಕನಕ ಜಯಂತ್ಯೋತ್ಸವ ಸಮಿತಿ, ಬಿಜಾಪೂರ, ೧೯೯೭

೯. ಗಂಗಾಧರ ದೈವಜ್ಞ, ಮಾಳಿಂಗರಾಯನ ಕಾವ್ಯ (ಅಡಿವೆಪ್ಪ ಒಡೆಯರ ಹಾಡಿದ) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೧೯೯೯

೧೦. ವೀರಣ್ಣ ದಂಡೆ, ದೇಶಿ ಸಂಪುಟ-೧ ಮತ್ತು ೨, ಭಾಗ್ಯಶ್ರಿ ಎಂಟರ್ ಪ್ರೈಸಸ್, ನಂ.೫೫೫, ೯ನೇ ಮುಖ್ಯರಸ್ತೆ, ವಿಜಯನಗರ, ೨೦೦೩

೧೧. ಚಂದ್ರಕಾಂತ ಬಿಜ್ಜರಗಿ, ಕುರುಬರ ಹೆಜ್ಜೆಗಳು : ಒಂದು ಅಧ್ಯಯನ, ಶೈಲಚಂದ್ರ ಪ್ರಕಾಶನ, ಬಿಜಾಪೂರ, ೨೦೦೬

೧೨. ತೊಂಟಾಪೂರ.ಎಸ್.ಬಿ., ತೇಜೋಮಯ ಹಾಲುಮತ ಪುರಾಣ, ವಿವಿಪದ್ಮ ಪ್ರಕಾಶನ, ಬೆಂಗಳೂರು. ೧೯೯೨

೧೩. ದೊಡ್ಡಣ್ಣ ಗದ್ದನಕೇರಿ, ವೀರದೇವರ ಸಂಪ್ರದಾಯ ಮತ್ತು ಆಚರಣೆಗಳು, ಕಮಲ ಪ್ರಕಾಶನ, ಚಿತ್ತವಾಡಗಿ, ೨೦೦೩

೧೪. ನಾಯ್ಕರ.ಬಿ.ಪ., ಹಾಲುಮತಸ್ಥರು, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೩

೧೫. ಬೋನಾ ಬಸವರಾಜ, ಹಾಲುಮತದ ಹುಟ್ಟು, ವಿದ್ಯಾನಿಧಿ ಪ್ರಕಾಶನ, ೨೦೦೦

೧೬. ಹಳ್ಳಿಕೇರಿ.ಎಫ್.ಟಿ., ಕುರುಬರ ಗುರು ಒಡೆಯರು, ವಿಕಾಸ ಪ್ರಕಾಶನ, ಶೋಧನ ಶಿಕ್ಷಕರ ಬಡಾವಣೆ, ಎಂ.ಪಿ. ಪ್ರಕಾಶನ ನಗರ, ಹೊಸಪೇಟೆ, ೨೦೦೭.

೧೭. ಕಲಬುರ್ಗಿ.ಎಂ.ಎಂ., ಮಾರ್ಗ (ಸಂಪುಟ-೪), ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೦೪

೧೮. ಗುಂಡಕರ್ಜಗಿ.ವಾಯ್.ಕೆ., ಹಾಲುಮತದ ಚರಿತ್ರೆ, ವಿಜೇತ ಪ್ರಕಾಶನ, ಗದಗ, ೨೦೦೫

೧೯. ವೀರೇಶ ಬಡಿಗೇರ, ಉತ್ತರ ಕರ್ನಾಟಕದ ಜಾನಪದ ಗೀತ ಮೇಳಗಳು : ಒಂದು ಸಾಂಸ್ಕೃತಿಕ ಅಧ್ಯಯನ, ವಿಮೋಚನಾ ಪ್ರಕಾಶನ, ಅಥಣಿ, ೧೯೯೯.

೨೦. ವೀರಣ್ಣ ದಂಡೆ, ಜನಪದ ಹಾಲುಮತ ಮಹಾಕಾವ್ಯ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೦

೨೧. ಶಿವಾನಂದ ಗುಬ್ಬಣ್ಣವರ, ಕರ್ನಾಟಕದ ಕುರುಬರು, ಅಕ್ಷಯ ಪ್ರಕಾಶನ, ಧಾರವಾಡ, ೧೯೯೨

೨೨. ಶಂ.ಭಾ. ಜೋಶಿ., ಹಾಲುಮತ ದರ್ಶನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

೨೩. ಶ್ರೀರಾಮ ಇಟ್ಟಣ್ಣನವರ, ಹಾಲಕೆನೆ, ಶ್ರೀಕಾಳಿದಾಸ ಶಿಕ್ಷಣ ಸಂಸ್ಥೆ, ವಿಜಾಪೂರ ೨೦೦೨

೨೪. ವೃಷಭೇಂದ್ರಸ್ವಾಮಿ ಎಸ್.ಎಮ್., ಜಾನಪದ ಸಾಹಿತ್ಯ ದರ್ಶನ ಭಾಗ-೧೦, ಕನ್ನಡ ಅಧ್ಯಯನ ಪೀಠ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ,

೨೫. ಸಿದ್ಧಲಿಂಗಯ್ಯ, ಗ್ರಾಮ ದೇವತೆಗಳು, ಮೂಲ ಭಾರತಿ ಪ್ರಕಾಶನ, ಬೆಂಗಳೂರು, ೧೯೯೭

೨೬. ಕರಿಯಪ್ಪ.ಎಂ., ಹಾಲತೊರೆ, ಕುರುಬರ ಸಂಘ, ಹದಡಿ ರಸ್ತೆ, ದಾವಣಗೆರೆ, ೨೦೦೩

* * *

## ೩. ವಕ್ತೃಗಳ ವಿವರಗಳು

| ಕ್ರ.ಸಂ | ಹೆಸರು | ವೃತ್ತಿ | ಗ್ರಾಮ |
|---|---|---|---|
| ೧ | ದುಂಡಪ್ಪ ಶಿವಪ್ಪ ಪೂಜಾರಿ | ವ್ಯಾಪಾರಸ್ಥರು | ಇಂಡಿ |
| ೨. | ಪ್ರಹ್ಲಾದ ಸಿದ್ದಪ್ಪ ಪೂಜಾರಿ | ಕೃಷಿ | ಅಂಜುಟಗಿ |
| ೩. | ಮಾಳಪ್ಪ ದುಂಡಪ್ಪ ಪೂಜಾರಿ | ಕುರಿಸಾಕಾಣಿಕೆ | ಬೋಳೆಗಾಂವ |
| ೪. | ಮಲಕಾರಿ ಲಂಗೋಟಿ | ಕೃಷಿ | ತಡಲಗಿ |
| ೫. | ಬೀರಪ್ಪ, ಕುರಿಯವರ | ಕೃಷ್ಟಿ | ಮಿರಗಿ |
| ೬. | ಸಿದ್ರಾಮಪ್ಪ ಮಸಳಿ | ಕೃಷಿ | ರೂಗಿ |
| ೭. | ಭರಮಣ್ಣ ಭೀಮಣ್ಣ ಹಾದಿಮನಿ | ಒಕ್ಕಲುತನ | ತಾಂಬಾ |
| ೮. | ಹಣಮಂತ ಶಿವಪ್ಪ ಪೂಜಾರಿ | ಒಕ್ಕಲುತನ | ತಾಂಬಾ |
| ೯. | ಜಗದೇವ ನಾಯಕೊಡಿ | ಕೃಷಿ<br>ಗ್ರಾಮ ಪಂಚಾಯತ್<br>ಅಧ್ಯಕ್ಷರು | ಬಾಳಸಂಗಿ |
| ೧೦. | ಚಂದು ಅಸಂಗಿಹಾಳ | ವ್ಯಾಪಾರಸ್ಥರು | ಲಾಳಸಂಗಿ |
| ೧೧. | ಸಾಹೇಬಗೌಡ ಭಟ್ಟರಕಿ | ಕೃಷಿ | ಗೋಳಸಾರ |
| ೧೨. | ಸೋಮಶೋಖರ ಸಿ.ಮಾರನೂರ | ಉಪನ್ಯಾಸಕರು<br>ಸರಕಾರಿ ಪಾಲಿಟೆಕ್ನಿಕ್ | ಲಾಳಸಂಗಿ |
| ೧೩. | ಚಿದಂಬರ ಬಂಡಗರ | ಮುಖ್ಯ ಶಿಕ್ಷಕರು<br>ಸರಕಾರಿ ಹೈಸ್ಕೂಲು | ದೇವರ ನಾವದಗಿ |
| ೧೪. | ಅಶೋಕ ಶಿವಪೂರ | ಕೃಷಿ | ರೂಗಿ |
| ೧೫. | ಜಟ್ಟೆಪ್ಪ ಹಣಮಂತ ಪೂಜಾರಿ | ಕುರುಸಾಕಾಣಿಕೆ | ಶಿರಾಡೋಣ |
| ೧೬. | ಜಾನಪ್ಪ ಕಿನ್ನಾಳ | ಶಿಕ್ಷಕರು | ತಾಂಬಾ |
| ೧೭. | ಎಲ್.ಎನ್.ಪೂಜಾರಿ | ವ್ಯಾಪಾರಸ್ಥರು | ಬಳ್ಳೊಳ್ಳಿ |
| ೧೮. | ಡಾ.ಎಸ್.ಕೆ.ಕೊಪ್ಪ | ಉಪನ್ಯಾಸಕರು | ಇಂಡಿ |
| ೧೯. | ಗಂಗಾಧರ ತೆಗ್ಗೆಳ್ಳಿ | ಒಕ್ಕಲುತನ | ಸಂಗೋಗಿ |

| | | | |
|---|---|---|---|
| ೨೦. | ನೀಲಪ್ಪ ಕೊಳ್ಳುರಗಿ | ಕೃಷಿ | ಉಮರಾಜ |
| ೨೧. | ಕರೆಪ್ಪ ಶಿವರಾಯ ಪೂಜಾರಿ | ಕೃಷಿ | ಮಿರಗಿ |
| ೨೨. | ವ್ಹಿ.ವಿ. ಬೊಗೊಂಡಿ | ಶಿಕ್ಷಕರು | ಲಾಳಸಂಗಿ |
| ೨೩. | ಅಂಬಣ್ಣ ಬಂಡಗರ | ಕೃಷಿ | ಲಾಳಸಂಗಿ |
| ೨೪. | ಸುರೇಶ ಬಂಡಗರ | ಕೃಷಿ | ಆಲಮೇಲ |

## ಡೊಳ್ಳಿನ ಹಾಡುಗಾರರು

| ಕ್ರ.ಸಂ. | ಹೆಸರು | ವೃತ್ತಿ | ವಯಸ್ಸು | ಗ್ರಾಮ |
|---|---|---|---|---|
| ೧. | ಜಗದೇವ ನಾಯ್ಕೊಡಿ | ಒಕ್ಕಲುತನ | ೪೮ | ಲಾಳಸಂಗಿ |
| ೨. | ಚಂದು ಅಸಂಗಿಹಾಳ | ವ್ಯಾಪಾರ | ೨೬ | ತಾಂಬಾ |
| ೩. | ಬಸವರಾಜ ಪೂಜಾರಿ | ಕೃಷಿ ಮತ್ತು ಕೂಲಿ | ೫೦ | ಬಳ್ಳೊಳ್ಳಿ |
| ೪. | ನಾಗಣ್ಣ ಭುಯ್ಯಾರ | ಕೃಷಿ | ೫೮ | ಹಿರೇರೂಗಿ |
| ೫. | ಅಂಬಣ್ಣ ಬಿಡಗರ | ಕೃಷಿ | ೪೮ | ಲಾಳಸಂಗಿ |

* * *



ಭಾಗೀರಥಿದೇವಿಯ-ರಥೋತ್ಸವ ಗೋಳಸಾರ



